# ಶ್ರೀ ವಾಗೀಶ ಕಾವ್ಯಮಾಲೆ

ರಕವಿ ವಾಗೀಶ ವಿರಚಿತ



ಪ್ರಕಾಶಕರು :

ಎಂ. ಮುದ್ದಣ್ಣ ಅಂಡ್ ಸನ್ಸ್

೧೫೮, ಅವಿನ್ಯೂ ರೋಡು

ಬೆಂಗಳೂರು - ೨

ವರಕವಿ ವಾಗೀಶ ವಿರಚಿತ

ಪ್ರಕಾಶಕರು :

ಎಂ. ಮುದ್ದಣ್ಣ ಅಂಡ್ ಸನ್ಸ್

೧೫೮, ಅವಿನ್ಯೂರೋಡು

ಬೆಂಗಳೂರು - ೨

# ಅಮೃತ ವಾಣಿ

ಬೆಳಗು ! ಪಂಚಾಚಾರ್ಯ ತತ್ವವೆ !
ಬೆಳಗು ! ಬಸವನ ಭಕ್ತಿ ತತ್ವವೆ !
ಬೆಳಗು ! ವಿರತರ ಶೂನ್ಯ ತತ್ವವೆ ! ಸರ್ವ ಸಮತೆಯೊಳು॥
ಬೆಳಗು ! ಜಂಗಮ ವಂಶ ದೀಪವೆ !
ಬೆಳಗು ! ಭಕ್ತರ ವಂಶ ದೀಪವೆ !
ಬೆಳಗು ! ದ್ವೇಷಾಸೂಯೆಗಳ ಕಡುಗತ್ತಲೆಯ ಕಳೆದು॥

# ಪ್ರಕಾಶಕರ ನುಡಿ

ಮನುಷ್ಯನ ಜೀವನದಲ್ಲಿ ಆಮೂಲ ಪರಿವರ್ತನೆ ಮಾಡುವಂತಹ ಘಟನೆಗಳು ಒಮ್ಮೊಮ್ಮೆ ಆಕಸ್ಮಿಕವಾಗಿ ಘಟಿಸುತ್ತವೆ. ಇಂತಹ ಘಟನೆಗಳು ಘಟಿಸಿದ ಮೇಲೆಯೇ ನಾವು ಅವುಗಳಿಗೆ ಸಂಬಂಧವನ್ನು ಕಲ್ಪಿಸಲು ಪ್ರಯತ್ನಿಸುತ್ತೇವೆ.

ಈಗ್ಗೆ ಎರಡು ಮೂರು ವರುಷಗಳ ಹಿಂದೆ ನನ್ನ ಜೀವನದಲ್ಲಿ ಒಂದು ಅಪೂರ್ವ ಘಟನೆ ಘಟಿಸಿತು. ನನ್ನ ನಾಮಕರಣದ ಕಾಲದಿಂದ ಕಾದು ಕೂತಿದ್ದ ಸಂಬಂಧವು ಸಾಕ್ಷಾತ್ಕಾರವನ್ನು ಕಂಡಿದ್ದು ಅಂದೇ. ಯೋಗಾಯೋಗವು ಯಾರನ್ನೂ ಕೇಳುವುದಿಲ್ಲ. ಅದೃಶ್ಯ ದೈವೀ ಶಕ್ತಿಯು ಸ್ನೇಹಿತರ ರೂಪದಲ್ಲಾಗಲಿ ಹಿತೈಷಿಗಳ ರೂಪದಲ್ಲಾಗಲಿ ಆ ಯೋಗದತ್ತ ಸಾಗಲು ನಮ್ಮನ್ನು ಪ್ರೇರಿಸುತ್ತದೆ. ಧರ್ಮಸ್ಥಳದಲ್ಲಿರುವ ಶ್ರೀ ಮುನಿದಾಸ ಅವರು "ಶ್ರೀಶೈಲಕ್ಕೆ ಹೋಗಬೇಕೆಂದು ನಾನು ಹೊರಟು ಬಂದಿದ್ದೇನೆ. ನೀವೂ ಖಂಡಿತ ಬರಬೇಕು" ಎಂದು ನನ್ನನ್ನು ಒತ್ತಾಯಪಡಿಸಿದರು. ಈ ಪ್ರಸ್ತಾಪ ಮುನ್ಸೂಚನೆ ಇಲ್ಲದೆ ಒಮ್ಮೆಲೇ ಬಂದುದರಿಂದ ನನಗೆ ಆಶ್ಚರ್ಯವೂ ಪುಣ್ಯಕ್ಷೇತ್ರದ ದರ್ಶನವಾಗಲಿದೆಯೆಂದು ಸಂತೋಷವೂ ಏಕಕಾಲಕ್ಕೆ ಆದವು. ಪೂರ್ವಸಿದ್ಧತೆಯಿಲ್ಲದೆ; ಶ್ರೀಶೈಲದಲ್ಲಿ ಯಾರು ಇರುತ್ತಾರೆ? ಅಲ್ಲಿಯ ಅನುಕೂಲ ಅನಾನುಕೂಲಗಳೇನು? ಎನ್ನುವುದನ್ನು ತಿಳಿದುಕೊಳ್ಳದೆ ಶಿವಯಾತ್ರೆಯನ್ನು ಕೈಕೊಂಡೆವು. ನನ್ನ ಪರಮ ಸ್ನೇಹಿತರಾದ ಶ್ರೀ ಬಿ. ಮರುಳಪ್ಪನವರೂ ನಮ್ಮ ಜೊತೆಯಲ್ಲಿ ಹೊರಟರು.

ಶ್ರೀಶೈಲಯಾತ್ರೆ ಮೊದಲಿನಂತೆ ಈಗ ಕಷ್ಟದಾಯಕವಾಗಿಲ್ಲ. ಶ್ರೀ ಮಲ್ಲಿಕಾರ್ಜುನಸ್ವಾಮಿಯ ಮಹಾದ್ವಾರದ ವರೆಗೂ ರಸ್ತೆ ನಿರ್ಮಾಣವಾಗಿದ್ದು ಈಗ ಯಾವ ಆಯಾಸವೂ ಇಲ್ಲದೆ, ಕಾರು, ಬಸ್ಸುಗಳಲ್ಲಿ ಯಾತ್ರಾರ್ಥಿಗಳು ಮಲ್ಲಿಕಾರ್ಜುನ ಮಹಾಲಿಂಗದ ದರ್ಶನ ಪಡೆಯಬಹುದಾಗಿದೆ.

ಯಾವ ಮಹಾಲಿಂಗದ ಅಂಕಿತದಿಂದ ನನಗೆ ನಾಮಕರಣ ಮಾಡಿದ್ದರೋ, ಯಾವ ಪವಿತ್ರ ಲಿಂಗದ ನಾಮೋಚ್ಚಾರಣೆ ದಿನಕ್ಕೊಮ್ಮೆಯಾದರೂ (ನನ್ನನ್ನು ಕರೆಯುವ ಮೂಲಕ) ನನ್ನ ಕರ್ಣಪಟಲದ ಮೇಲೆ ಬೀಳುತ್ತಿತ್ತೋ ಅಂತಹ ಮಲ್ಲಿಕಾರ್ಜುನ ಜ್ಯೋತಿರ್ಲಿಂಗದ ಪ್ರತ್ಯಕ್ಷ ದರ್ಶನದಿಂದ ನನಗಾದ ಆನಂದಕ್ಕೆ ಮೇರೆ ಎಲ್ಲಿಂದ ಬಂತು ? ಅಳತೆಗೆ ನಿಲುಕದ ಆ ಪರಮಾನಂದದಲ್ಲಿ ಮೈಮರೆತೆ. ಆಗ ನನಗೆ "ಮಲ್ಲಿಕಾರ್ಜುನ"ನೆಂದೇ ನಾಮಕರಣ ಮಾಡಬೇಕೆಂದು ಒತ್ತಾಯಪಡಿಸಿದ ವ್ಯಕ್ತಿಯ ನೆನಪು ಸಹ ಆಗದೇ ಇರಲಿಲ್ಲ. ಇತ್ತೀಚೆಗೆ ಶಿವಾಧೀನರಾದ ಆ ಮಹಾತ್ಮರು ನನ್ನ ನಾಮಕರಣದ ಸಂದರ್ಭವನ್ನು ಆಗಾಗ ನನ್ನ ಮುಂದೆ ಎತ್ತಿ ತೋರಿಸುತ್ತಿದ್ದರಲ್ಲದೆ "ನಿನ್ನಿಂದ ಆ ಸ್ವಾಮಿಯ ಹೆಸರಿನಲ್ಲಿ ಪುಣ್ಯಕಾರ್ಯಗಳು ನಡೆಯಬೇಕಾಗಿವೆ" ಎಂದು ಎಚ್ಚರಿಕೆ ಕೊಡುತ್ತಿದ್ದರು.

ಮಲ್ಲಿಕಾರ್ಜುನ ಜ್ಯೋತಿರ್ಲಿಂಗದ ಸ್ಪರ್ಶದಿಂದ ನನ್ನಲ್ಲಿ ಜ್ಯೋತಿಸ್ಫುರಣವಾಯಿತಾದರೂ ಆ ಜ್ಯೋತಿ ಪ್ರಕಾಶಮಾನವಾದುದು ಆ ಪರಶಿವನ ಅಪರಾವತಾರಿಗಳಾದ ಶ್ರೀಶೈಲ ಜಗದ್ಗುರು ಮಹಾಸ್ವಾಮಿಗಳವರ ದರ್ಶನದಿಂದ. ಶಿವನು ಗುರುರೂಪದಿಂದ ಪ್ರತ್ಯಕ್ಷನಾಗುತ್ತಾನೆಂದು ಆಗಮಗಳು ಸಾರುತ್ತವೆ.

ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರ ಸಂದರ್ಶನಲಾಭ ನಮಗಾದುದು ಆತ್ಮಕೂರಿನಲ್ಲಿ. ಶ್ರೀಶೈಲದಲ್ಲಿ ಶಿಥಿಲವಾಗಿದ್ದ ಶ್ರೀಶೈಲ ಜಗದ್ಗುರು ಪಂಡಿತಾರಾಧ್ಯ ಪೀಠ ಮತ್ತು ಶ್ರೀಶೈಲ ಜಗದ್ಗುರು ಮಠಗಳನ್ನು ನೋಡಿ ನಿರಾಶರಾದ ನಮಗೆ ಆತ್ಮಕೂರಿನಲ್ಲಿ ವಾಸ್ತವ್ಯ ಮಾಡಿದ್ದ ಶ್ರೀ ಜಗದ್ಗುರು ಮಹಾಸ್ವಾಮಿಗಳ ದರ್ಶನದಿಂದ ನೆಮ್ಮದಿಯುಂಟಾಯಿತು. ಅವರೊಡನೆ ನಡೆಯಿಸಿದ ಲಘುಸಂಭಾಷಣೆಯಿಂದ ನಾವು ಅತ್ಯಂತ ಪ್ರಭಾವಿತರಾದೆವು. ಶ್ರೀಶೈಲದಲ್ಲಿ ಶಿಥಿಲವಾಗಿದ್ದ ಪೀಠದ ಜೀರ್ಣೋದ್ಧಾರದ ಪ್ರಸ್ತಾಪ ಬಂದಾಗ ನಾವು ಶ್ರೀ ಜಗದ್ಗುರು ಮಹಾಸ್ವಾಮಿಗಳವರನ್ನು ಬೆಂಗಳೂರಿಗೆ ದಯಮಾಡಿಸಬೇಕೆಂದು ಕೇಳಿಕೊಂಡೆವು. ಶ್ರೀ ಜಗದ್ಗುರುಗಳವರು ಅದಕ್ಕೆ ಸಮ್ಮತಿಸಲಿಲ್ಲ. ಬೆಂಗಳೂರಿಗೆ ದಯಮಾಡಿಸಿದರೆ ಪುರಪ್ರವೇಶ ಮಹೋತ್ಸವಕ್ಕೆ ವೆಚ್ಚಮಾಡುವ ಹಣವನ್ನು ಪೀಠೋದ್ಧಾರಕ್ಕೆ ವ್ಯಯಿಸುವುದು ಅತ್ಯಾವಶ್ಯಕವೂ ಸೂಕ್ತವೂ ಆಗಿದೆಯೆಂದು ಅಪ್ಪಣೆ ಕೊಡಿಸಿ

ದರು ಮತ್ತು ಆ ರೀತಿ ಪ್ರಯತ್ನ ಮಾಡಲು ನಮ್ಮಿಂದ ಸಂಕಲ್ಪ ಮಾಡಿಸಿದರು. ಮಲ್ಲಿಕಾರ್ಜುನಸ್ವಾಮಿಯ ಕೃಪೆಯಿಂದ ಈ ಮಹಾಕಾರ್ಯ ಸಾಧ್ಯವಾಗುವುದೆಂದು ಆಶೀರ್ವದಿಸಿದರು. ಮುಂದೆ ಆ ಕಾರ್ಯವು ಬೆಂಗಳೂರಿನ ನನ್ನ ಮಿತ್ರರ ಸಹಾಯ ಸಹಕಾರದಿಂದ ಸಫಲವೂ ಆಯಿತು.

ಈ ಸಂದರ್ಭದಲ್ಲಿ ನನಗೆ ದೊರೆತ "ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಚರಿತ್ರೆ" ಎಂಬ ಉದ್ಗ್ರಂಥವು ಈ "ಕಾವ್ಯಮಾಲೆಯ" ಪ್ರಕಟನೆಗೆ ಮೂಲಕಾರಣವಾಯಿತು. ಪಂಡಿತ ಹೆಚ್. ಎಂ. ವೀರಭದ್ರಯ್ಯನವರು ಬರೆದಿರುವ ಈ ಗ್ರಂಥವನ್ನು ನಾನು ಮನಃಪೂರ್ವಕ ಓದಿದೆನು. ಈ ಗ್ರಂಥದಲ್ಲಿ "ಸಾಹಿತ್ಯಸೇವೆ" ಎನ್ನುವ ಪ್ರಕರಣದಲ್ಲಿ ಶ್ರೀ ಜಗದ್ಗುರು ಮಹಾಸ್ವಾಮಿಗಳವರು ಪೂರ್ವಾಶ್ರಮದಲ್ಲಿ ಆಗಾಗ ರಚಿಸಿದ ಕಾವ್ಯಗಳ ಕೆಲಭಾಗಗಳನ್ನು ಮಾತ್ರ ಪ್ರಕಟಿಸಲಾಗಿದೆ. ಈ ಪದ್ಯಗಳು ಕಾವ್ಯದಲ್ಲಿ ಅಭಿರುಚಿ ಇರುವ ಎಲ್ಲರ ಮೆಚ್ಚುಗೆಗೂ ಪಾತ್ರವಾಗಿವೆ. ನನ್ನ ಮಿತ್ರರನೇಕರು ಈ ಪದ್ಯಗಳ ಪೂರ್ತಿ ಪಾಠವನ್ನು ತರಿಸಿದರೆ ಅವುಗಳಿಗೆ ರಾಗಾಲಾಪ ಹಾಕಿಸಿ ಸಂಗೀತಬದ್ಧವಾಗಿ ಹಾಡಿಸಬಹುದೆಂದು ಸಲಹೆ ಕೊಟ್ಟರು. ಅದೇ ಪ್ರಕಾರ 8–10 ಪದ್ಯಗಳ ಪೂರ್ತಿ ಪಾಠವನ್ನು ತರಿಸಿ ಅವುಗಳಿಗೆ ರಾಗಾಲಾಪ ಹಾಕಿಸಿ ಸಂಗೀತ ವಿದ್ವಾನ್ ಶ್ರೀ ಹೊನ್ನಪ್ಪ ಭಾಗವತರಿಂದ ಹಾಡಿಸಿ ಟೇಪ್ ರಿಕಾರ್ಡು ಸಹ ಮಾಡಿಸಲಾಯಿತು. ಕರ್ನಾಟಕದ ತುಂಬೆಲ್ಲ ಈ ಪದ್ಯಗಳು ಜನಪ್ರಿಯವಾದವು. ಈ ಹಾಡುಗಳನ್ನು ಕೇಳಿದವರೆಲ್ಲ ತಮ್ಮ ಮೆಚ್ಚುಗೆಯನ್ನು ಪ್ರಕಟಿಸಿದರಲ್ಲದೆ ಪದ್ಯ ಸಾಹಿತ್ಯವು ಎಲ್ಲರಿಗೂ ದೊರೆಯುವಂತಾದರೆ ಅನುಕೂಲವಾಗುವುದೆಂದು ಸೂಚಿಸಿದರು. ಜನರ ಈ ಬೇಡಿಕೆಯನ್ನು ಮತ್ತು ನನ್ನ ಮನದ ಹಂಬಲವನ್ನು ಶ್ರೀ ಜಗದ್ಗುರು ಮಹಾಸ್ವಾಮಿಗಳವರ ಮುಂದೆ ಇರಿಸಿದೆನು. ಕರುಣಾರ್ದ್ರ ಹೃದಯರಾದ ಶ್ರೀ ಜಗದ್ಗುರು ಮಹಾಸ್ವಾಮಿಗಳವರು "ಶ್ರೀ ವಾಗೀಶ ಕಾವ್ಯಮಾಲೆಯ" ಪ್ರಕಟನೆಗೆ ಕೃಪೆದೋರಿ ಒಪ್ಪಿಗೆಯಿತ್ತರು.

ಈ "ಕಾವ್ಯಮಾಲೆ"ಯಲ್ಲಿ ಶ್ರೀ ಜಗದ್ಗುರುಗಳವರು ಪೂರ್ವಾಶ್ರಮದಲ್ಲಿ ರಚಿಸಿರುವ ಅಸಂಖ್ಯ ಕಾವ್ಯಗಳಿಂದ ಆಯ್ದುಕೊಂಡ ಕೆಲವು ಪದ್ಯಗಳನ್ನು ಮಾತ್ರ ಪೋಣಿಸಲಾಗಿದೆ. ಶ್ರೀ ಜಗದ್ಗುರುಗಳವರು "ವರಕವಿ"ಗಳಾಗಿದ್ದಾರೆ. ಅದೇ ಪ್ರಕಾರ ಅವರು "ಆಶುಕವಿ"ಗಳೂ ಆಗಿದ್ದಾರೆ. ಶ್ರೀ ಜಗದ್ಗುರು ಮಹಾ

ಸ್ವಾಮಿಗಳವರಿಂದ ಸಂಸ್ಕೃತದಲ್ಲಿ ವಿರಚಿತವಾಗಿರುವ "ಮಲ್ಲಿಕಾರ್ಜುನ ಸುಪ್ರಭಾತ"ವನ್ನು ಪ್ರತ್ಯೇಕವಾಗಿ ಪ್ರಕಟಿಸಲು ಸಂಕಲ್ಪಿಸಿದ್ದೇವೆ. ಶ್ರೀ ಜಗದ್ಗುರು ಮಹಾಸ್ವಾಮಿಗಳವರ ಬಗೆಗಾಗಲಿ ಅವರಿಂದ ರಚಿತವಾಗಿ ಪ್ರಕಟಿಸಲ್ಪಡುತ್ತಿರುವ ಈ "ಕಾವ್ಯಮಾಲೆ"ಯ ಬಗೆಗಾಗಲಿ ಬರೆಯುವ ಶಕ್ತಿ ನನ್ನದಲ್ಲ. ಅಂತಹ ಶಕ್ತಿ ನನ್ನಲ್ಲಿ ಇಲ್ಲವೂ ಇಲ್ಲ. ನಾನು ಕೇಳಿ ಸಂತೋಷಪಟ್ಟುದನ್ನು ಮತ್ತು ನಾನು ನೋಡಿ ಸಂತೋಷಪಟ್ಟುದನ್ನು ಇನ್ನೊಬ್ಬರಿಗೆ ಕೇಳಿಸಲು ಮತ್ತು ತೋರಿಸಲು ಪ್ರಯತ್ನ ಬೀಳುವುದು ನನ್ನ ಹುಟ್ಟು ಸ್ವಭಾವವಾಗಿದೆ. ಆ ಸ್ವಭಾವಕ್ಕನುಗುಣವಾಗಿ ಈ "ಕಾವ್ಯಮಾಲೆ"ಯನ್ನು ಪ್ರಕಟಿಸಲು ಪ್ರಯತ್ನಿಸಿದ್ದೇನೆ. ನನ್ನ ಈ ಅಲ್ಪ ಪ್ರಯತ್ನದಿಂದ ಯಾರಿಗಾದರೂ ಸಂತೋಷವಾದರೆ, ಉಪಕಾರವಾದರೆ ನಾನು ಉಪಕೃತನಾದೆನೆಂದು ತಿಳಿಯುತ್ತೇನೆ.

ಇದೇ ರೀತಿ ನನ್ನ ಸ್ನೇಹಿತರಾದ ಚಿತ್ರಕಲಾಚಾರ್ಯ ಶ್ರೀ ಬಿ. ಮರುಳಪ್ಪನವರಿಂದ "ಶ್ರೀಶೈಲ ದರ್ಶನ"ವೆಂಬ ವರ್ಣರಂಜಿತ ಚಲನಚಿತ್ರವನ್ನು ತಯಾರಿಸಿ ಅನೇಕಕಡೆ ಅದನ್ನು ಪ್ರದರ್ಶಿಸಿ ಅನಂತ ಜನಸಮೂಹಕ್ಕೆ ಕ್ಷೇತ್ರದರ್ಶನ ಮಾಡಿಸಿದ್ದೇವೆ. ಶ್ರೀಶೈಲ ಕ್ಷೇತ್ರದ ಸಮಗ್ರ ದೃಶ್ಯವು ಈ ಚಿತ್ರದಲ್ಲಿ ಅಡಕವಾಗಿದ್ದು ಇದನ್ನು ನೋಡಿದವರಿಗೆ ಸ್ವತಃ ಶ್ರೀಶೈಲಕ್ಕೆ ಹೋಗಿ ನೋಡಿದಷ್ಟು ಆನಂದವಾಗುತ್ತದೆ. ಇಂತಹ ಮನಾಕರ್ಷಕ ಚಿತ್ರವನ್ನು ಪ್ರದರ್ಶಿಸಿ ಜನರನ್ನು ಸಂತೋಷಪಡಿಸಲು ಯಥಾಸಾಧ್ಯ ಪ್ರಯತ್ನ ಮಾಡಿದ್ದೇನೆ.

"ಶ್ರೀ ವಾಗೀಶ ಕಾವ್ಯಮಾಲೆ"ಯ ಪ್ರಕಟನೆಗೆ ಕೃಪೆಯಿಟ್ಟು ಅನುಮತಿಯಿತ್ತ ಶ್ರೀ ಜಗದ್ಗುರು ಮಹಾಸ್ವಾಮಿಗಳವರಿಗೆ ನನ್ನ ಹೃತ್ಪೂರ್ವಕ ಶಿರಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇನೆ. ಶ್ರೀ ಜಗದ್ಗುರು ಮಹಾಸ್ವಾಮಿಗಳವರ ಭಾವಚಿತ್ರವನ್ನು ಮುದ್ದಾಗಿ ತಯಾರಿಸಿಕೊಟ್ಟ ನನ್ನ ಸ್ನೇಹಿತರಾದ ಶ್ರೀ ಬಿ. ಮರುಳಪ್ಪನವರಿಗೆ ನಾನು ಋಣಿಯಾಗಿದ್ದೇನೆ. ಅತ್ಯಲ್ಪಕಾಲದಲ್ಲಿಯೇ ಅಂದವಾಗಿ ಮುದ್ರಣ ಮಾಡಿಕೊಟ್ಟ ಚಿತ್ರಾ ಪ್ರಿಂಟರಿಯವರಿಗೆ ನನ್ನ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಡಿ. ಮಲ್ಲಿಕಾರ್ಜುನಯ್ಯ.
ಮಾಲಿಕರು:
ಎಂ. ಮುದ್ದಣ್ಣ ಅಂಡ್ ಸನ್ಸ್,
ಬೆಂಗಳೂರು-೨



ಶ್ರೀ ಮದ್ಗಿರಿರಾಜ ಸೂರ್ಯ ಸಿಂಹಾಸನಾಧೀಶ್ವರ
ಶ್ರೀ "ಗಂಟೆ" ಶ್ರೀಶೈಲ ಜಗದ್ಗುರು
"ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ" ಮಹಾಸ್ವಾಮಿಗಳವರು

# " ಶ್ರೀಶೈಲದರ್ಶನ "

ಇದುವೇ ಶ್ರೀಶೈಲ ಕಾಣಿರೋ। ಸದ್ಭಕ್ತಜನರೆ।
ಮುದದಿಂದಲಿ ಮಲ್ಲೇಶ್ವರ ಭ್ರಮರಾಂಬೆಯರಿರುವ ತಾಣ ॥ ಪ ॥

೧

ಜಗವ ಲಿಂಗಮಯವ ಮಾಡಲು, ಕೈಲಾಸಪತಿಯು।
ಯುಗಗಳಾದಿಯಲ್ಲಿ ಭುವಿಯೊಳು ॥
ಸೊಗಸಿನಿಂದ ಕಾಶಿಮುಖ್ಯವಾದ ಪುಣ್ಯ ತಾಣಗಳೊಳು।
ನಗಜೆಯೊಡನೆ ನೆಲೆಸುತಿಲ್ಲಿ, ಮಲ್ಲಿನಾಥನಾಗಿ ಮೆರೆವ ॥

೨

ಅರುಣಾಸುರನಂದು ಸುರರನು, ನಿರುತದೊಳು ಹಿಂಸಿ।
ಸಿರಲು ದೇವಿ ಭ್ರಮರ ರೂಪನು ॥
ಧರಿಸುತವನ ಕೊರಳ ಕೊರೆದು ಧರೆಯನುಳಿಸಿ ಮಲ್ಲಿನಾಥ।
ನರಸಿಯಾಗಿ ಭ್ರಮರಾಂಬೆಯು, ಮೆರೆಯುತಿರುವ ತಾಣವಿದುವೆ ॥

೩

ಶಿವನ ಕುವರ ಪಂಡಿತಾರ್ಯನು, ಶ್ರೀ ಮಲ್ಲಿನಾಥ।
ಶಿವಲಿಂಗದೊಳುದಿಸಿ ಬಂದನು ॥
ಅವನಿಯೊಳಗೆ ವೀರಶೈವ ಮತವ ಸವೆಯದಂತೆ ನಿಲಿಸಿ।
ಶಿವನ ತತ್ತ್ವ ಸಾರಿ ಮೆರೆದನವನ ಸೂರ್ಯಪೀಠವಿದುವೆ ॥

೪

ಆದಿಗಾದಿಗಿದು ಅನಾದಿಯು, ಶಿಲಾದ ಮುನಿಯು।
ಶೋಧಿಸಿರುವ ಶಿವನ ಹಾದಿಯು ॥
ಆದಿನಂದಿನಾಥನುದಿಸಿ ಮೇದಿನಿಯೊಳು ಭಕ್ತಿ ಪಥವ।
ವೇದಮಾರ್ಗವಿಡಿದು ನಿತ್ಯ ಬೋಧೆಗೈದ ತಾಣವಿದುವೆ ॥

೫

ಕಾಶಿಯಲ್ಲಿ ಹರಿವ ಗಂಗೆಯು, ಪಾಪಿಗಳ ಪಾಪ ।
ದೋಷಭಾರದಿಂದ ತುಂಬಿಯು ॥
ಘಾಸಿಯಾಗಿ ಪಾಪವದನು ಮಲ್ಲಿನಾಥನಡಿಗೆ ಬಿಡಲು ।
ತೋಷದಿಂದ ಬಂದು **ಪಾತಾಳಗಂಗೆ**ಯಾದಳಿಲ್ಲಿ

೬

ಕಾಶಿ ಮರಣದಿಂದ ಮೋಕ್ಷವು ಶ್ರೀಶೈಲಶಿಖರ ।
ದರ್ಶನೇನ ನಾಸ್ತಿ ಜನ್ಮವು ॥
ದೋಷವೆಲ್ಲ ಕಳೆವುದೆಂದು ವ್ಯಾಸಮುನಿಯು ಪೊಗಳಿ ಬರೆದ ।
ನಾಶರಹಿತನಾದ **ಶಿಖರದೀಶ**ನಿಲ್ಲಿ ಮೆರೆಯುತಿಹನು ॥

೭

**ಪಾಲಧಾರಿ ಪಂಚಧಾರೆಯು,** ಸೇವಿಸಲು ಭವದ ।
ಮೂಲದೋಷ ನಾಶಕಾರಿಯು ॥
ಫಾಲನೇತ್ರಶಿವನು ನಿತ್ಯ ಲೀಲೆಗೈವನಿಲ್ಲಿ ತಾನು ।
ಕಾಲಭಯವ ಕಳೆಯಲೆಂದು **ಆಟಕೇಶ**ನಾಗಿ ಮೆರೆವ ॥

೮

ನರನ ಜನ್ಮ ಪರಮಪಾವನ, ಕೈಲಾಸಪತಿಯ ।
ಚರಣಸೇವೆಗಿದುವೆ ಸಾಧನ ॥
ದುರಿತದೂರನಾಗಿ ನಡೆಯೆ, ಪರಮಪದವು ದೊರೆವುದೆಂಬ ।
ಶರಣವಾಕ್ಯದಂತೆ, ದಾರಿಗಿರುವುದೇ **ಕೈಲಾಸದ್ವಾರ** ॥

೯

ಭೀಮ ತನ್ನ ಗದೆಯ ಹೊಡೆತದೆ, ಇಬ್ಭಾಗಮಾಡಿ ।
ಭೂಮಿಯಿಂದ ನೀರುಕಾಣದೆ ॥
ತಾಮಸವನು ಬಿಟ್ಟು ಶಿವನ ಪ್ರೇಮದಿಂದ ಭಜಿಸಲಾಗಿ ।
ಸ್ವಾಮಿ ಮೆಚ್ಚಿ ನೀರನಿತ್ತ ಧಾಮವಿದುವೆ **ಭೀಮಕೊಳ್ಳ** ॥

೧೦

ವೀರಭದ್ರನಂದು ದಕ್ಷನು, ಶಿವನಿಂದೆಗೈಯ್ಯ ।
ಲಿರಿಯುತವನ ಶಿರವ ಕೊತೆದನು ॥
ಸಾರಿ ಶಿವನ ದ್ವೇಷಿಗಳಿಗೆ, ಘೋರ ನರಕವೀಯಲೆಂದು ।
ಧೀರನಾಗಿ ನೆಲೆಸಿ ಮೆರೆವ **ನಾಗಲೂಟಿ** ಇದುವೆ ಕಾಣ ॥

೧೧

**ಬೈಲುವೀರಭದ್ರ** ದೇವನು, ಬಿಸಿಲಲ್ಲಿ ನಿಂತು ।
ಎಲ್ಲ ಜನರ ಪಾಪ ಸುಡುವನು ॥
ಬಿಲ್ಲು ಬಾಣ ಹಣೆಯ ಕಣ್ಣು, ಶಿರದಿ ಲಿಂಗ ಧರಿಸಿದಿವಗೆ ।
ಬಲ್ಲ ಜನರು ನೆರಳು ಮಾಡಲವರ ವಂಶ ನಾಶವಹುದು ॥

೧೨

ಸಾಕ್ಷಿಗಣಪ ದಾರಿಗಿರುವನು ಯಾತ್ರಿಕರನೆಲ್ಲ ।
ಈಕ್ಷಿಸುತ್ತ ಸುಮ್ಮನಿರುವನು ॥
ಸಾಕ್ಷಿಗಾರನಂತೆ ಜನರ ಪಾಪ ಪುಣ್ಯಗಳನು ಬರೆದು ।
ಮೋಕ್ಷದೊಡೆಯ ಶಿವಗೆ ತಿಳುಹಿ ಶಿಕ್ಷಿಸುವನು ಚತುರನಿವನು ॥

೧೩

ಮಲ್ಲಿನಾಥನೆಡದ ಭಾಗದಿ, ಮೆರೆಯುವುದು ನೋಡು ।
**ಮಲ್ಲಿಕಾಖ್ಯ ಕುಂಡ** ತೇಜದಿ ॥
ಅಲ್ಲದಿತ್ತ ಬಲಕೆ ಕಾಣುತಿಹುದೆ **ಮನೋಹಾರ ಕುಂಡ** ।
ನಿಲ್ಲದಿವನು ಸೇವಿಸಲ್ಕೆ ಎಲ್ಲ ಸುಖವು ದೊರೆಯುತಿಹುದು ॥

೧೪

ರಾವಣನನು ಕೊಂದ ರಾಮನು ಆ ಬ್ರಹ್ಮಹತ್ಯ ।
ನೋವಿನಿಂದ ಬಳಲುತಿದ್ದನು ॥
ಭಾವಲಿಂಗ ಸಾಸಿರವನು; ಸೇವೆಗೈವುದೆನಲಗಸ್ತ್ಯ ।
ಕಾವುದೆಂದು ರಾಮ ಹದಿಟೆಗೈದುದೀ **ಸಹಸ್ರಲಿಂಗ** ॥

೧೫

ಪಂಚಮಠಗಳಲ್ಲಿ ಮೆರೆವವು, ಶ್ರೀ ರೇಣುಕಾದಿ ।
ಪಂಚಗುರು ನಿವಾಸವುಳ್ಳವು ॥
ಸಂಚಿತಾದಿ ಕರ್ಮವೆಲ್ಲ ಕಳೆವುದಿವನು ನೋಡಿದವಗೆ ।
ಪಂಚಮುಖದ ಶಿವನ ಕೃಪೆಯು ಪೂರ್ಣವಾಗಿ ದೊರೆಯುತಿಹುದು ॥

೧೬

ಸಿದ್ಧರೇಣುಕಾರ್ಯ ತೀರ್ಥವು ಮನುಮುನಿಜನಂಗ ।
ಳಿದ್ದ ತಾಣವಿದುವೆ ಶುದ್ಧವು ॥
ಮದ್ದುಮಂತ್ರ ತಂತ್ರವಾದ ವಶ್ಯಸಿದ್ಧಿಗಿದುವೆ ತಾಣ ।
ಸಿದ್ಧಿಪಡೆಪನಾದಿ ಶಂಕರಾರ್ಯನಿಲ್ಲಿ ದಿಟವು ಕಾಣ ॥

೧೭

ಪಾಂಡುಸುತರ ಪಂಚಲಿಂಗಗಳ್ ಕಂಗೊಳಿಸುತಿಹವು ।
ಕಂಡಜನರ ಪಾಪಹಾರಿಗಳ್ ॥
ಪುಂಡರೀಕವದನೆ ದ್ರೌಪದಿಯು ಪ್ರತಿಷ್ಠೆಗೈದ ಲಿಂಗ ।
ಚಂಡಭಾನು ಸದೃಶವಾಗಿ ಹೊಳೆಯುತಿಹುದು ಪಂಚಲಿಂಗ ॥

೧೮

ಪರಮ ವೀರಶೈವ ತತ್ವವ; ಶ್ರೀಗಿರಿಯೊಳಂದು ।
ಒರೆದು ಮನುಮುನೀಂದ್ರ ವೃಂದವ ॥
ಪೊರೆದು ಪಿಂಗಳನನ ಕುಷ್ಟರೋಗವನ್ನು ನಾಶಗೈದ ।
ಗಿರಿಯ ಪೀಠದೊಡೆಯ ಸದಾನಂದ ನೆಲೆಸಿ ಮೆರೆದ ತಾಣ ॥

೧೯

ನನ್ನೆಚೋಡನೆಂಬ ರಾಜಗೆ, ಶಿವದೀಕ್ಷೆಯಿತ್ತು ।
ಮಾನ್ಯನೆನಿಸುತಾಂಧ್ರಭೂಮಿಗೆ ॥
ತನ್ನ ಯೋಗಬಲದೆ ಗಿರಿಯ ಪೀಠದೊಡೆಯನಾಗಿ ಮೆರೆದ ।
ಚೆನ್ನ ಜಂಗಮಾರ್ಯ ಮಲ್ಲಿಕಾರ್ಜುನನ ಸಮಾಧಿ ನೋಡ ॥

೨೦

**ಕದಳಿವನವು** ಮೆರೆಯುತಿರುವುದು ; **ಮಹದೇವಿಯಕ್ಕ** ।
ನಿದರೊಳಿರುವ ಗವಿಯ ಹೊಕ್ಕುದು ॥
ಮದನವೈರಿ ಮಲ್ಲಿನಾಥ ಚದುರೆಗೊಲಿದು ಮೋಕ್ಷವಿತ್ತು !
ಸದಮಲಾಂಗ ಚೆನ್ನಮಲ್ಲಿಕಾರ್ಜುನಯ್ಯನಾದ ತಾಣ ॥

೨೧

ಜ್ಞಾನಮೂರ್ತಿ **ಅಲ್ಲಮಪ್ರಭು,** ಶ್ರೀಗಿರಿಗೆ ಬಂದು ।
ಧ್ಯಾನಮಗ್ನನಾದ ತಾಣವು ; ॥
ಸ್ವಾನುಭಾವಸುಖದ ಶಿರಿಯ ಸೂರೆಗೊಂಡು ಶರಣಜನಕೆ ।
ತಾನು ಕದಳಿಬನದಿ ಕದಳಿಯಾಗಿ ಕಾಣದಾದ ತಾಣ ॥

೨೨

**ಬಾಲಯೋಗಿ ಸಿದ್ಧರಾಮನು,** ಸೊನ್ನಲಿಗೆಯಿಂದ ।
ಸಾಗುತಿಲ್ಲಿ ತಪವ ಗೈದನು ॥
ಕಾಲಹರನು ಮೆಚ್ಚುತವಗೆ, ಫಾಲನೇತ್ರವಿತ್ತು ಪೊರೆದು ।
ಲೀಲೆದೋರಿ ಮೆರೆದ ತಾಣ **ಸಿದ್ಧರಾಮಕೊಳ್ಳ** ಕಾಣ ॥

೨೩

**ಹೇಮರೆಡ್ಡಿ ಮಲ್ಲಮಾಂಬೆಯು,** ಗೋವುಗಳ ಕಾಯ್ವ ।
ನೇಮವಿಡಿದ ಮುಗ್ಧಬಾಲೆಯು ॥
ಪ್ರೇಮದಿಂದ ಮಲ್ಲಿನಾಥ ಸ್ವಾಮಿಯನ್ನು ಪೂಜೆಮಾಡಿ ।
ಕಾಮಿತಾರ್ಥ ಪಡೆದ ತಾಣ, ಇದುವೇ **ಗೋಗರ್ಭ** ಕಾಣ ॥

೨೪

ಹಿಂದುಯುಗದ ಚಂದ್ರಗುಪ್ತನು, ಕಟ್ಟಸಿದ **ಕೋಟೆ** ।
ಯಂದವಾದ ಶಿಲ್ಪ ಕಲೆಯನು ॥
ಹೊಂದಿ ಶಿವಚರಿತ್ರ, ದೇವಲೋಕಚಿತ್ರ, ಯೋಗಚಿತ್ರ ।
ವೃಂದದಿಂದ ತುಂಬಿ ಸತ್ಯ ಶೋಧಕರನು ಕರೆಯುತಿಹುದು ॥

೨೫

ಕಂಬಿಕಾವಡಿಗಳು ಕಾಂಬವು ಶ್ರೀಶೈಲತೀರ್ಥ ।
ತುಂಬಿಕೊಂಡು ಸಾಗುತಿರುವವು ॥
ಕಂಬಿಗಣಾಚಾರಿಗಳನು ಗಿರಿಯ ಪಂಡಿತಾರ್ಯ ಗುರುವು ।
ಕುಂಭಿನಿಯೊಳು ಭಕ್ತಜನಕೆ ತೀರ್ಥವೀಯೆ ನೇಮಿಸಿಹನು ॥

೨೬

ಎಲ್ಲಿ ನೋಡಲಲ್ಲಿ ಕನ್ನಡ, ಗೀರ್ವಾಣಭಾಷೆ ।
ಯಲ್ಲಿ ಕೆಲವು ತೆಲುಗು ಲಿಪಿಗಳು ॥
ಅಲ್ಲಿ ಗುಡಿಯ ಮುಂದೆ ಪ್ರೌಢದೇವರಾಯ ಜಂಗಮರಿಗೆ ।
ಸಲ್ಲಿಸಿರುವ ದಾನ ಲಿಪಿಯು ಕಂಬದಲ್ಲಿ ಮೆರೆಯುತಿಹುದು ॥

೨೭

ಗಿರಿಯ ತುಂಬ ಪರುಷಮಣಿಗಳು, ರಸಧಾತು ತುಂಬಿ ।
ಹರಿವ ಸಣ್ಣ ಸಣ್ಣ ಝರಿಗಳು ॥
ಗಿರಿಯು ಬೆಂಕಿ ಕಾರಲಿಲ್ಲಿ, ನೀರಸುರಿವ ತರುಗಳುಂಟು ।
ವರವನೌಷಧಿಗಳು ಜನಕೆ ಅಮೃತವೀಯೆ ಕಾಯುತಿಹವು ॥

೨೮

ನವ್ಯಮಾರ್ಗವಿಲ್ಲಿಗಾಗಿದೆ ಪಾತಾಳಗಂಗೆ ।
ಭವ್ಯವಾಗಿ ಮೇಲೆ ಹರಿದಿದೆ ॥
ದಿವ್ಯದೀಪಮಾಲೆ ಕ್ಷೇತ್ರದೆಲ್ಲಕಡೆಯು ಹೊಳೆಯುತಿಹುದು ।
ಸುವ್ಯವಸ್ಥೆಯಿಂದ ಶೈಲವೆಲ್ಲ ನಗರನಾಗುತಿಹುದು ॥

೨೯

ಅಡವಿಯಲ್ಲ ಇಂದ್ರವನವಿದು, ವಾಗೀಶ ಕವಿಯು ।
ನುಡಿದ ವಾಣಿಯಮೃತ ಸಮವಿದು ॥
ಒಡೆಯ ಮಲ್ಲಿನಾಥನಡಿಯ ಬಿಡದೆ ನಂಬಿ ಭಜಿಸುವವರು ।
ಪೊಡವಿಯೊಳಗೆ ಸಕಲ ಸುಖವ ಪಡೆದು ಮುಕ್ತರಾಗುತಿಹರು ॥

---

# ಬನ್ನಿ

೧

ಅರ್ಜುನನನಂಬಂ ಧರಿಸಿದ ಬನ್ನಿ ।
ಅರ್ಜನೆಯಂ ಫಲಗೊಳಿಸಿದ ಬನ್ನಿ ॥
ದುರ್ಜನವಂಶವ ನಶಿಸಿದ ಬನ್ನಿ ।
ಬನ್ನಿ ಶಮಿಯು ಬಂಗಾರವಿದೆನ್ನಿ ॥

೨

ರಾಮನಭೀಷ್ಟವ ನೀಡಿದ ಬನ್ನಿ ।
ಹೋಮಾಗ್ನಿಗೆ ಬೇಕಾಗುವ ಬನ್ನಿ ॥
ಕಾಮಿತ ಫಲಗಳನೀಯುವ ಬನ್ನಿ ।
ಬನ್ನಿ ಶಮಿಯು ಬಂಗಾರವಿದೆನ್ನಿ ॥

೩

ಪಾಪ ತಾಪವಂ ಕಳೆಯುವ ಬನ್ನಿ ।
ಕೋಪ ವೈರಿಯಂ ಕೊಲ್ಲುವ ಬನ್ನಿ ॥
ಶ್ರೀ ಪರಮೇಶನು ಮೆಚ್ಚುವ ಬನ್ನಿ ।
ಬನ್ನಿ ಶಮಿಯು ಬಂಗಾರವಿದೆನ್ನಿ ॥

೪

ಹರ ಹರಿ ವಿಧಿಗಳು ಮುಡಿಯುವ ಬನ್ನಿ ।
ನರನಾರಿಯರಿಂ ಪೂಜಿಪ ಬನ್ನಿ ॥
ಗಿರಿಸುತೆ ಹರಸತಿ ಕಾಳಿಯು ಬನ್ನಿ ।
ಬನ್ನಿ ಶಮಿಯು ಬಂಗಾರವಿದೆನ್ನಿ ॥

೫

ಗುರುವಿಗಿತ್ತು ಪದಕೆರಗುವ ಬನ್ನಿ ।
ಹಿರಿಯರು ಹಿರಿಹಿರಿ ಹಿಗ್ಗುವ ಬನ್ನಿ ॥
ವರುವರುಷಕೆ ಹರುಷದ ಹೊಸ ಬನ್ನಿ ।
ಬನ್ನಿ ಶಮಿಯು ಬಂಗಾರವಿದೆನ್ನಿ ॥

೬

ವಂದೇಮಾತರಮೆಂಬುವ ಬನ್ನಿ |
ಹಿಂದೂರಾಜ್ಯವ ಪೊರೆಯುವ ಬನ್ನಿ ||
ಹಿಂದೂಮಾತೆಯ ಮಕುಟವು ಬನ್ನಿ |
ಬನ್ನಿ ಶಮಿಯು ಬಂಗಾರವಿದೆನ್ನಿ ||

೭

ಕೈಗೆ ಕೊಟ್ಟು ಕುಣಿಸಾಡುವ ಬನ್ನಿ |
ವೈಗೆ ಮೋದವಂ ನೀಡುವ ಬನ್ನಿ ||
ಬೈಗಿನ ಸಮಯದಿ ಮುಡಿಯುವ ಬನ್ನಿ |
ಬನ್ನಿ ಶಮಿಯು ಬಂಗಾರವಿದೆನ್ನಿ ||

೮

ಬನ್ನಿ ಬನ್ನಿ ನಿಮಗೀಯುವೆ ಬನ್ನಿ |
ಮುನ್ನ ಮುನ್ನ ಕರವೇಡಂ ತನ್ನಿ ||
ನನ್ನದು ಮೊದಲೆಂದನ್ನದೆ ಬನ್ನಿ |
ಬನ್ನಿ ಶಮಿಯು ಬಂಗಾರವಿದೆನ್ನಿ ||

೯

ವಿಜಯ ದಶಮಿಯಂ ಮುಗಿಸುವ ಬನ್ನಿ |
ಸುಜನರಿಗುಡುಗರೆಯುಡಿಸುವ ಬನ್ನಿ ||
ಗಜ ತುರಗಗಳಂ ಮೆರೆಸುವ ಬನ್ನಿ |
ಬನ್ನಿ ಶಮಿಯು ಬಂಗಾರವಿದೆನ್ನಿ ||

೧೦

ಕೊಳ್ಳಿರಿ ಕೊಳ್ಳಿರಿ ಬನ್ನಿರಿ ಬನ್ನಿ |
ಮುಳ್ಳಿಲ್ಲದ ಶುಭ ಬನ್ನಿಯ ತನ್ನಿ ||
ಒಳ್ಳೆಯ ವಾಗೀಶನಿಗಿಡಿ ಬನ್ನಿ |
ಬನ್ನಿ ಶಮಿಯು ಬಂಗಾರವಿದೆನ್ನಿ ||

———

# ಮೈಸೂರು ರಾಜ್ಯ ವರ್ಣನೆ

೧

ಏನು ತೆಂಗಿನ ಸಾಲು ಸಾಲುಗ ।
ಳೇನು ಬಾಳೆಯು ಗುಂಪು ಗುಂಪುಗ ।
ಳೇನು ಮಾಗೊನೆ ಗೊನೆಗಳಿಂ ಬಳ್ಕಾಡುವಾಮ್ರವಶಂ ॥
ಏನು ಗಿರಿಕರಿ ವೃಂದ ನದಿನದ ।
ವೇನು ದುರ್ಗಮದುರ್ಗವಿಂತೀ ।
ಮಾನವೇಶನ ರಾಜಕನುಗುಣ ರಾಜ್ಯವಿನ್ನುಂಟೇ ? ॥

೨

ಎಲ್ಲಿ ನೋಡಿದಡಲ್ಲಿ ಕೆಕೆಗಳ ।
ದೆಲ್ಲಿಯೂ ಬೀದಿಗಳು ಬೀದಿಯೊ ।
ಳೊಳ್ಳೆ ಮರಗಳು ದಣಿದ ಜನಕನುರಾಗ ವೀಯುವವು ॥
ಸೊಲ್ಲು ಸೊಲ್ಲುಗೆ ರಾಜಮನೆತನ ।
ದೆಲ್ಲರಿಗೆ ಸುಖವಾಗಲೆಂಬುವ ।
ಸಲ್ಲಲಿತ ಸಜ್ಜನಗಳಿದೀನಾಡೆ ನಿಜನಾಡು ॥

---

# ಸೃಷ್ಟಿವೈಚಿತ್ರ

೧

ದಿನಕರನು ತಾಯೊಡಲ ಸೇರುತಿರುವಲ್ಲಿ ।
ಬನದೊಳಗೆ ಸಣ್ಣ ನದಿ ಹರಿಯುತಿರಲಲ್ಲಿ ॥
ಹನಿ ಹನಿಯು ಮುತ್ತಿನಂತುದುರುತಿರುವಲ್ಲಿ ।
ತನುಮನವು ಬನಸಿರಿಯೊಳಾಡುತಿರಲಲ್ಲಿ ॥

೨

ಶಿಲೆಯಿಂದ ಬಲುರಮ್ಯಮಾದ ಗಿಡದಡಿಯು ।
ನೆಲಮಲ್ಲಿಕಾಲತೆಯ ಬನಗುಂಪಿನೆಡೆಯು ॥
ಹಲಕೆಲವು ಗಿಡ್ಡಾದ ಗುಡ್ಡಗಳ ಪಡೆಯು ।
ಜಲದಿಂದ ತಂಪುನೆಲಸಿಹುದೆಲ್ಲ ಕಡೆಯು ॥

೩

ಸುಳಿಯೆಲೆಯ ಕುಮುದಗಳು ಹೊಳೆಹೊಳೆಯತಿರಲು
ಎಳೆಹುಲ್ಲು ಬೆಳೆ ಬೆಳೆದು ತಲೆಯಾಡುತಿರಲು ॥
ಅಳಿಗುಂಪು ಗಿಳಿಗುಂಪು ಸುಳಿದಾಡುತಿರಲು ।
ಎಳೆಮರಿಯ ಜಿಂಕೆಗಳು ನೀರ್ಗುಡಿಯುತಿರಲು ॥

೪

ಹರಿಯುತಿರೆ ಮೆರೆಯುತಿರೆ ಕೊರೆಯುತಿರೆ ಜಲವಲ್ಲಿ ।
ಸುರಿಯುತಿರೆ ಜರಿಯುತಿರೆ ತುಂಬಿನಿಂಪೂವಲ್ಲಿ ॥
ಹರುಷದಿಂ ಕಬ್ಬಕ್ಕಿ ಗುಬ್ಬಕ್ಕಿ ಕುಳಿತಲ್ಲಿ ।
ಪರಿಪರಿಯ ದನಿಯಿಂದ ನಲಿಯುತಿರಲಲ್ಲಿ ॥

೫

ಕೋಗಿಲೆಯು ಮಾಮರದೆ ಕುಳಿತು ಪಾಡುವುದು ।
ಕಾಗೆಯದರಡಿ ಇರ್ದು ನುಡಿಗೆಡಿಸುತಿಹುದು ॥
ಗೂಗೆಯುದರಡಿ ಪೊಟರಿನೊಳು ಪಲುಬುತಿಹುದು ।
ರಾಗರಚನೆಯಿದೆಂತೊ? ಬರೆಯೆ ಬರದಿಹುದು ॥

೬

ಮಾಮರದೊಳೊಮ್ಮೆ ಮುಡಿದಾವರೆಯೊಳೊಮ್ಮೆ ।
ಹೇಮ ಬಕುಳದೊಳೊಮ್ಮೆ ಸಂಪಿಗೆಯೊಳೊಮ್ಮೆ ॥
ಪ್ರೇಮದಿಂ ನಲಿದಾಡಿ ವನಮರುತನಾಗ ।
ನೇಮಿಗಳ ಪ್ರೇಮಿಗಳನುಬ್ಬಿಸಿದ ಬೇಗ ॥

೭

ಮಂದ ಮಾರುತನೊಂದು ಚಂದದಿಂ ನಿಂದ ।
ಹಿಂದಿನಿಂ ಬಿರುಸಾಗಿ ಬರಬರನೆ ಬಂದ ॥
ಸುಂದರದ ತರುಲತೆಯ ಗಂಧವನೆ ತಿಂದ ।
ಕೆಂದೂಳದೊಳು ಬೆರೆತು ಬೇಸರವ ತಂದ ॥

೮

ಗಿಡಮರಗಳಡಗಿದವು ಕಡೆಗಾಣದಂದು ।
ಒಡನೊಡನೆ ಕುಣಿಕುಣಿದು ಬಡವಾದವಂದು ॥
ಕಡೆಗೊಂದು ಪೂವಿಲ್ಲದಂತಾಗೆ ಬನವು ।
ಕಡೆಗಾಯ್ತು ಬಿರುಗಾಳಿಯುಬ್ಬರದ ಬಡುವು ॥

೯

ಕವಿಯೊಬ್ಬನುಬ್ಬಿನಿಂ ಕೋಗಿಲೆಯ ದನಿಯಿಂ ।
ಹವಣರಿದು ಹಾಡಿದನು ಮರುತನೊಳಮನೆಯಿಂ ॥
ಕವಿಯುತಿರೆ ಕತ್ತಲೆಯು ಸವೆಯುತಿರೆ ಮನವು ।
ಶಿವನ ತಾಂಡವನೃತ್ಯ ಸಮಯದಾ ನೆನವು

೧೦

ಚಂದಿರನು ಮೂಡಿದನು ವಂದನೆಯ ಮಾಡಿದನು ।
ಸಂದೇಹವಳಿದಳಿದು ಸಂತಸದೊಳಂದು ॥
ತಂದೆ ಕಬ್ಬಿಗರೊಡೆಯ ಸುಲ್ಲೇಶ ಸಲಹೆಂದು ।
ಚಂದದಿಂದೂರಮನೆ ಸೇರಿದನು ಬಂದು ॥

೧೧

ಜಗದೊಳೀಶನ ಸೃಷ್ಟಿಕಾರ್ಯದೊಳೆ ತೊಡಕಿರಲು ।
ಪೊಗಳಲೇನಿನ್ನುಳಿದ ಕಾರ್ಯಗಳ ಬಗೆಯ ॥
ಜಗದೀಶ! ಸಲಹಯ್ಯ ಕಬ್ಬಿಗರ ಸತ್ಕುಲವ ।
ಹಗಲಿರುಳು ನಿನ್ನನೇ ನೆನಸುತಿರುವ ॥

೧೨

ನಾಡಿನೊಂದೆಡೆಯಲ್ಲಿ ನೋಡಿದುದ ಬರೆದಿಹೆನು ।
ಬೇಡಿದುದ ಕವಿಗಳಿಗೆ ಕೊಡುವರಾರು? ॥
ಬೇಡ ಬೇಡೆನುತಿರಲು ಕಾಡಿ ಬಾಯ್ದೆರೆದಿಡುವ ।
ಮೂಢರೀ ಕವಿಜನರ ನೋಡರೇಕೆ?

೧೩

ಹಲ್ಲು ಹದನಾಗಿರಲು ತಿನ್ನೆ ಕಡಲಿಗಳಿಲ್ಲ ।
ಬೆಲ್ಲ ಕಡಲಿಗಳಿರಲು ಹಲ್ಲಿಲ್ಲವು ॥
ಎಲ್ಲಿಯಾ ರೀತಿಯಿದು? ಪಕ್ಷಪಾತವಿದಲ್ತೆ?
ಎಲ್ಲರನು ಸಮನಾಗಿ ನೋಡು ಶಿವನೇ!

೧೪

ಭಕ್ತವತ್ಸಲನೆಂಬ ಬಿರುದು ನಿನಗಿಹುದಯ್ಯ ।
ಶಕ್ತಿಪತಿಯೆಂಬ ಶುಭನಾಮವಿಹುದು ॥
ಮುಕ್ತಿನಾಥನು ಎಂದು ನಲಿನಲಿದು ಹಾಡುವೆನು ।
ಸೂಕ್ತ ಸುಖವನು ಕೊಟ್ಟು ಪಾಲಿಸಯ್ಯ ॥

೧೫

ಹಿರಿದೊಂದು ಕಿರಿದೊಂದು ಮಾಡಿ ಮೂಜಗವನ್ನು
ಗರಗರನೆ ತಿರುಗಿಸುವುದೇನ್ನೊಳ್ಳಿತಹುದು? ॥
ಹರಹರಾ! ಶಿವಶಿವಾ! ಎಂದು ಸ್ತುತಿಗೈದರೂ ।
ಕರುಣಾಳು ನೀನಾಗದಿರೆ ನಿನಗೆ ಕೇಡು ॥

———

# ಸಾಧ್ವಿಯತಾದ ಆಪು

೧

ಆಪೆ ನೀನೆಂದಿಗೂ ಆಪತ್ತಿನೊಳು ಬೆಳೆದೆ ।
ವೇಪನವೆ ಫಲವಾಯ್ತು ಕಡೆಗಾದರೂ ॥
ಮಾಪತಿವ್ರತೆಯಂತೆ ಮಣಿ ಮಣಿವೆ ಬಿಡುಸಾಕು ।
ರೂಪವತಿಯರ ಹಾಡು ಇದೆ ಹಾಡೆಲ್ಲೈ

೨

ಹರುಕ ಗರುಕೆಗೆ ಗಂಡನೊಳ್ಳೆಯುವ ದೊರೆತಿರಲು ।
ದೊರಕನೇಂ ನಿನಗೊಳ್ಳೆ ಪತಿದೇವನು ? ॥
ನೆರೆನಂಬಿ ಕರಪಿಡಿದ ಪತಿರಾಯನೆಂತಿರಲಿ ।
ಬೆರೆಯುವುದೆ ಧರ್ಮವೆಂದೊರೆಯುತಿಹೆಯಾ ?

೩

ಪಾಲ್ಗಡಲ ತಡದೆಡೆಯ ಮೇಲ್ಗಡೆಯ ನೆಲದಲ್ಲಿ ।
ಬಲ್ಗಂಪನೀಯುತಿಹ ಮರಗಳುಂಟು ॥
ಕಲ್ಗಂಪು ನೆಲೆಸಿರುವ ಕಡಲ ಕೋವೊಂದಲ್ಲಿ ।
ಮೇಲ್ಗಡೆಯೊಳಿಹುದು ನೀನಿರುವೆಯಾ ಅಲ್ಲಿ ?

೪

ನದಿಯೊಂದು ಹರಿದಿಹುದು ನಮ್ಮೂರ ನೆರವಿನೊಳು ।
ಬದಿಗೊಂದು ಸರಮುಂಟು ಸರದೊಳಲ್ಲಿ ॥
ಮುದದಿಂದ ನೀರ್ಗೋಳಿ ಮೀನುಗಳು ನಲಿಯುತಿವೆ ।
ಅದರೊಳಗೆ ನೀನಿರ್ದು ಸೊಗದೆ ಬಾಳುವೆಯಾ ?

೫

ನೀನೊಲ್ಲದಿದ್ದರೂ ನಿನ್ನ ಮರಿಮಕ್ಕಳನು ।
ಮಾನಿನಿಯೆ ಕಳಿಸಿಕೊಡು ಸುಖದೆ ಬಾಳುವರು ॥
ಹಾನಿ ನಿನಗಿಲ್ಲವಮ್ಮ ಮಾನಿಗಳೆ ಅಲ್ಲಿಹರು ।
ಹೀನರೇನಬ್ಬೆ ದರ್ಭೆಯರು ಲಕ್ಕೆಯರು ?

ತರತರನೆ ನಡುನಡುಗಿ ಗರಗರನೆ ತಿರುತಿರುಗಿ ।
ಸರಸರನೆ ಬರುವ ಪತಿಗಂಜಿ ಮಣಿದಿರುವೆ ॥
ಮರುಗಿದೆನು ಕೊರಗಿದೆನು ನಿನಗಾಗಿ ನಾ ಮನದಿ ।
ಹರಕೆ ಗಟ್ಟಿದೆ ಸಲಹು "ವಾಗೀಶ" ನೆಂದೆ ॥

———

## ಗೌರೀಹಾಡು

ತಾಯೆ ಗೌರಿ! ಮಾಯೆ ಭಕುತಿ! ತಾಯೆ ಶಂಕರಿಯೇ ।
ರಾಯ ರಾಯ ನಮಿತಪಾದೆ। ಕಾಯೆ ಪಾರ್ವತಿಯೆ ॥ ಪ ॥

೧

ಇಂದುವದನೆ । ಕುಂದರದನೆ । ಮಂದಗಮನೆಯೇ ॥
ಮಂದಹಾಸ ಗಣಪಮಾತೆ । ಸುಂದರಾಂಗಿಯೇ ॥

೨

ಶಿವನ ಸತಿಯೆ । ಭುವನಮತಿಯೆ । ಕವಿಜನಾನತೆಯೇ ॥
ಹವನ ಕವನ ಪ್ರೀತೆ ಪೂತೆ । ಕುವಲಯಾಕ್ಷಿಯೇ ॥

೩

ರಾಗರಹಿತೆ । ಯೋಗಿ ವಿನುತೆ । ಆಗಮಜ್ಞಳೇ ॥
ಭೋಗ ಮೋಕ್ಷದಾತೆ ಖ್ಯಾತೆ । ವಾಗೀಶಾದ್ಯಳೇ ॥

———

# ಶ್ರೀ ರೇಣುಕಸ್ತವನಂ

೧

ಶ್ರೀಗುರುವೆ ಸಕಲಾಗಮಜ್ಞನೆ ।
ಯೋಗಿಜನ ನಿವಹಾರ್ಜಿತನೆ ಭವ ।
ಸಾಗರೋನ್ಮಜ್ಞಾಜ್ಞಜನದುರಿತೌಘ ಪರಿಹರನೇ ॥
ಭೋಗಿಭೂಷಣ ವಕ್ತ್ರಜಾತನೆ ।
ಭೂಗಣೇಂದ್ರನೆ ಬುಧಜನಸ್ತ್ರವ ।
ರಾಗನೇ ನೀಂ ವೀರಪೀಠೇಶ್ವರನೆ ಪೊರೆಯನ್ನಂ ॥

೨

ಹರಿವಿರಂಚಿ ಸುರಾಸುರರ್ಗಂ ।
ಹರುಷದಿಂದಿಷ್ಟಾರ್ಥವೀಯುತ ।
ಪೊರೆದು ಲೋಕವನೆಲ್ಲವಂ ಗುರುವಾಗಿ ಮೆರೆಯುತ್ತ ॥
ಪರಮಗತಿಗಾಣಲ್ಕೆ ಸುಸ್ತರ ।
ದಿರವ ಬೋಧನೆಗೈದು ಭರ್ಗನ ।
ನರಿದ ಜಗದಾಚಾರ್ಯ ರೇಣುಕ ಗುರುವೆ ಪೊರೆಯನ್ನಂ ॥

೩

ಭುವಿಯೊಳಾಸ್ತಿಕ ಮತಮತಂಗಳ ।
ಸವೆಯದಂದದೆ ನಿರ್ಮಿಸಲ್ಕಾ ।
ಶಿವನ ನುಡಿ ವಿಡಿದಮಲ ಕೊಲ್ಲೀಪಾಕಿ ಪಟ್ಟಣದಿ ॥
ತವೆವಿರಾಜಿಪ ಸೋಮನಾಥನೊ ।
ಳವತರಣಮಂ ಪೊಂದಿ ಕುಂಭೋ ।
ದ್ಭವಮುನೀಂದ್ರ ಪ್ರಮುಖರಂ ಪೊರೆದವನೆ ಪೊರೆಯನ್ನಂ ॥

೪

ಸರ್ವ ದುರ್ಮತವಾದಿಗಳ ಘನ ।
ಗರ್ವವಂ ಪರಿಹರಿಸುತವರಿಗೆ ।
ಸರ್ವಸಾಕ್ಷಾತ್ಕಾರವಾಗುವ ಬೋಧನೆಯ ಗೆಯ್ದು ॥
ಉರ್ವಿಪತಿ ವಿಕ್ರಮನಭೀಷ್ಟವ ।
ನೋರ್ವನೇ ಪೂರ್ಯೆಸಿ ಸುಖವಂ ।
ಸರ್ವಜನವರಿವಂತೆ ನೀಡಿದ ರೇಣುಕನೆ ಪೊರೆಯೈ ॥

೫

ಹರನಿಗಿಂತತ್ತತ್ತನಾದಿಯು ।
ಪರಮಪಾವನ ಪಾವನನು ನೀ ।
ನರುಹಲೇನಭಿಮಾನವೈ ಜಗದಾರ್ಯ ರೇಣುಕನೆ ॥
ಗುರುವೆ ಮೂಜಗದಿರುವೆ ನೀನದ ।
ಕರುಹಿರುವೆಯೈ ವೀರಶೈವವ ।
ಧರೆಯೊಳಗೆ ಸರಿಪೋಲ್ವ ಮತಮಿಲ್ಲೆಂದಗಸ್ತ್ಯನಿಗೆ ॥

೬

ಆ ವಿಭೀಷಣ ಮನದಭೀಷ್ಟವ ।
ನೀವಿ ಕಾಂಚಿಯ ವಿಷ್ಣುಶಿರ ಕಂ ।
ಪಾವರೋಧವಗೆಯ್ದು ವಿಕ್ರಮಗಿತ್ತು ಸುರಗಿಯನು ॥
ಭಾವಜಾಪಹನಾಗಿ ಮೆರೆದು ಕು ।
ಭಾವಸಂಯುತ ಕುಟಿಲ ಸಿದ್ಧನ ।
ಭಾವಮದವುಂ ತರೆದ ಶ್ರೀಗುರು ರೇಣುಕನೆ ಸಲಹೈ ॥

೭

ಸುರಮುನಿವೃಂದ ವಂದ್ಯ ಹರವಕ್ತ್ರ ಶಿತಾಬ್ಜಜ ವೇದವೇದ್ಯ ।
ಸ್ಫುರದುರು ವೀರಶೈವಮತದೇವತರು ಪ್ರಭವಾದ್ಯ ಕುಂಭಜಾ ॥
ಚರಿತ ಸುಭಕ್ತಿತುಷ್ಟ ನರವೀರ ವಿಭೀಷಣ ಹೃದ್ಗತೇಷ್ಟದ ।
ಪುರಚಿತವಂದನಾದಿ ಘನಸೇವೆಯ ಕೈಕೊಳು ರೇಣುಕೇಶ್ವರಾ ॥

---

# ಸು ನೀ ತಿ

೧

ನಿನ್ನಯ ಮನವದು ಚನ್ನಾಗಿರುತಿರೆ ।
ಮುನ್ನಂ ನಿನ್ನಂ ಕರೆವರೆಲೋ ॥
ನಿನ್ನಯ ಮನವದು ಚನ್ನಾಗಿರದಿರೆ ।
ಹಿನ್ನಿನಿಂದಲುಂ ಕರೆಯರೆಲೋ ॥

೨

ಅನ್ನವ ನೀಡ್ವಭಿಮಾನಿಗಳೂ ಘನ ।
ಮಾನ್ಯರು ಲೋಕದಿ ಕೇಳೆಲವೋ ॥
ಅನ್ನವನುಂಡವರುನ್ನತಿ ಹಳಿಯುವ ।
ಚಿನ್ನರು ಲೋಕದಿ ಬಹಳೆಲವೋ ॥

೩

ತನ್ನವಗುಣವಂ ಮುನ್ನಿರಿಸುವಸಜ್ಜನ ।
ವಿನ್ನೀಲೋಕದೊಳಿಲ್ಲವು ಕೇಳ್ ॥
ಅನ್ಯರ ಗುಣಗಳಿಗನ್ಯಾಯವನುರೆ ।
ಮನ್ನಿಪ ಜನ ಬಹಳುಂಟಿಲೆ ಕೇಳ್ ॥

೪

ಹೊನ್ನಿಗೆ ಹೆಣ್ಣಿಗೆ ಮಣ್ಣಿಗೆ ಬಯಸುವ ।
ಕುನ್ನಿಗಳುಂಟೇ ಯುಗದೊಳಗೆ ॥
ಹೊನ್ನಿಗೆ ಹೆಣ್ಣಿಗೆ ಮಣ್ಣಿಗೆ ಬಯಸದ ।
ಅಣ್ಣಗಳಿಲ್ಲೀ ಜಗದೊಳಗೆ

೫

ದೇಶದ್ರೋಹವ ಧರ್ಮದ್ರೋಹವ ।
ಹೇಸದೆ ಮಾಡ್ವವರುಂಟಿಲೊ ಕೇಳ್ ॥
ಈಶನ ಇರುವನು ಲೇಶವು ಅರಿಯದ ।
ಭೂಸುರರೇ ಬಹಳುಂಟಿಲೊ ಕೇಳ್ ॥

೬

ಬಾಯೊಳು ಬ್ರಹ್ಮವನಾಡುತ ಕೆಡಿಸುವ ।
ಮಾಯಾವಿಗಳೇ ಹೆಚ್ಚಾದರು ಕೇಳ್ ॥
ಕಾಯವಿಶುದ್ಧರ ಕಾಮವಿದೂರರ ।
ನೋಯಿಪ ಸಂತತಿ ಬೆಳೆದುದು ಕೇಳ್ ॥

———

# ಬಾಲಕರಿಗುಪದೇಶ

ಗುಣವಂತನಾಗೆಲವೊ ಬಾಲಕನೆ ನೀನು ।
ಹಣವು ಬಲು ದೊಡ್ಡದಲ್ಲಲ್ಲವಿದಕೇನು ॥ ॥ ಪಲ್ಲ ॥

೧

ಮೊದಲು ಹೆತ್ತವ್ವನೊಳಗಾಡಿ ಕಲಿನುಡಿಯ ।
ಕದನವಾಡದೆ ಮಾತಗೇಳ್ ವಂಶದೊಡೆಯ ॥
ಅದು ಬೇಕು ಇದು ಬೇಕು ನನಗೆಂದು ಹಿಂಸಿಸದೆ ।
ಮದ ಮತ್ಸರವನಳಿದು ಬೇಗ ಬೆಳೆ ತನಯಾ ॥

೨

ನಿನ್ನ ಗೆಳೆಯರಕೂಡ ಜಗಳವಾಡಲಿಬೇಡ ।
ನಿನ್ನನೋದಿಸುವ ಗುರುಗಳ ಜರಿಯಬೇಡ ॥
ನಿನ್ನ ವಿದ್ಯಾಭ್ಯಾಸದೊಳಗೆ ಹಿಂದಿರಬೇಡ ।
ನಿನ್ನ ಬಂಧುಗಳೊಂಡನೆಂದರೆನಬೇಡ ॥

೩

ತಂದೆಯಾಡುವ ನುಡಿಯು ವೇದನುಡಿಯೆಂದೆನುತ ।
ಸಂದೇಹವಿಲ್ಲದಾಲಿಸು ನೀತಿವಿನತಾ ॥
ಹಿಂದೆ ರಾಮನು ತಂದೆಯಿಂದ ವಚನವನೆಸಗ ।
ಲಿಂದಿಗೂ ಕೀರ್ತಿ ಕಳೆಗೊಂಡಿಹುದು ಮಗುವೇ ॥

೪

ತಾಯಿನಾಡಿನ ಸೇವೆ ಮಾಡದಿರಬೇಡ ।
ತಾಯಿ ನುಡಿ ಬೇಡವೆಂದೆನ್ನುತಿರಬೇಡ ॥
ತಾಯಿ ಸರಸತಿಯೊಲಿಯೆ ಗರ್ವದಿಂದಿರಬೇಡ ।
ಬಾಯಿಯೊಳು ದುಡುಳ ನುಡಿಯಾಡಲೇಬೇಡ ॥

೫

ಚಿಕ್ಕವಯದೊಳು ಕೆಟ್ಟಚಟವ ಕಲಿಯಲಿಬೇಡ ।
ಸೊಕ್ಕಿನವನೀ ಹುಡುಗನೆಂದೆನಿಸಬೇಡ ॥
ಸಿಕ್ಕ ಸಿಕ್ಕವರ ಗೆಳೆತನವ ಮಾಡಲೆಬೇಡ ।
ಅಕ್ಕರದೆ ವಾಗೀಶ ನುಡಿದನಿದ ನೋಡಾ ॥

---

# ಖಾ ದಿ

ಖಾದಿಯನೆ ತೊಡಿರಣ್ಣ ಸಾದರದೆ ಬೇಗ ।
ಮೇದಿನಿಯ ಜಯಕಾಗಿ ಕಾದುವೊಡೆ ಈಗ ॥ ॥ ಪಲ್ಲ ॥

೧

ಬಿಲ್ಲು ಬಾಣಗಳೇಕೆ? ಕಲ್ಲುಕವಣಿಗಳೇಕೆ?
ಜೊಲ್ಲು ಸುರಿಸುವುದೇಕೆ ಚೀರಾಡುತ ॥
ಕೊಲ್ಲಿರಿವರನು ಕೊಲ್ಲಿರೆಂಬ ನುಡಿಯೇಕೆ?
ಎಲ್ಲವೂ 'ಖಾದಿ'ಯೊಳು ತುಂಬಿತುಳುಕುವುದು ॥

೨

ಮಲಮಲ್ಲು ಸೈನು ಮುಂತಾದ ಬಟ್ಟೆಗಳಿಂದ ।
ಕುಲಛಲವು ಕೆಡುತಿಹುದು ಕೇಳಿರಣ್ಣಾ ॥
ಕೆಲರು ಗೋ ಮೊದಲಾದ ಪುಣ್ಯ ಪಶುಗಳ ಕೊಂದು ।
ಕೊಳೆತ ನೆಣದಿಂದವನು ಹದಗೊಳಿಸುತಿಹರು ॥

೩

ಮಲಮಲ್ಲು ಬಹಳಗ್ಗ ಖಾದಿ ಬಲು ತುಟ್ಟಿ ।
ಎಲೊ ಬಿಡೆಲೊ ಇದನಾರು ಕೊಳ್ಳಬೇಕೆಂದು ॥
ಹಲುಬದಲೆ ನೀವೀಗ ರಾಟೆಯನೆ ತಿರುಗಿಸಲು ।
ಮಲಮಲ್ಲಿಗಿಂತಗ್ಗವಾಗುವುದು ಖಾದಿ ॥

೪

ನಮ್ಮದೇಶಕೆ ಬಂದು ಅರಳೆಯನು ಬಳಕೊಂಡು ।
ಸುಮ್ಮನೇ ಪೋಗುವದು ಮೊದಲು ಮೊದಲು ॥
ಒಮ್ಮೆಗೊಂದಾಣೆಯನು ನಮಗಿತ್ತು ಬಿಳಿಮಂದಿ ।
ಹಮ್ಮಿನಿಂದೆಂಟಾಣೆ ಸೆಳೆಯುತಿಹುದಣ್ಣಾ ॥

೫

ಪರದೇಶದವರಂತೆ ನಿಮ್ಮ ಮರ್ಯಾದೆಗಳು ।
ಕಿರಿದಾದವಲ್ಲವದರಿಂದ ನೀವು ॥
ಮರೆಯದಲೆ ಖಾದಿಯನು ಧರಿಸಿರ್ರೈ ಜಾಣರೇ ।
ಹರುಷದಿಂ 'ವಾಗೀಶ' ನರಿದರಿದು ಪೇಳ್ದಾ ॥

———

# ಸಮಾಜ ಪುರುಷರು

೧

ನುಡಿವರಯ್ಯೋ ಜನರು ।
ಬಿಡರು ಮಾತ್ಸರ್ಯಮಂ ।
ಕೆಡುವರನ್ಯರನು ಕೆಡಿಸುತ್ತಲಿಹರು ॥
ಹಡೆದ ತಾಯಿಯ ಹರೆಯ ।
ಕಡುಮುದದೆ ಬಣ್ಣಿಸುವ ।
ಕೆಡುಗಬ್ಬಿಗರ ಪಥವ ತುಳಿಯುತಿಹರು ॥

೨

ಶಾಂತಿ ಶಾಂತಿಯು ಎಂದು ।
ಸಂತಸದೆ ಪೇಳುವರು ।
ಅಂತಕನ ಭಾವವನು ಬಿಡದಿರುವರು ॥
ಎಂತು ಜನರೊಲಿಯುವರು ।
ಸಂತೋಷ ಪೊಂದುವರು ।
ಸಂತೆಯೊಳು ವ್ಯಾಪಾರಿಯಂತಿರುವರು ॥

೩

ಒಳಗೊಂದ ಬಿಡವಪ್ಪಿ ।
ಬಳಿಮಂದಿಗೊಂದೊರೆದು ।
ಗೆಳೆಯರಂದದಿ ನಟನೆಯಾಡುತಿಹರು ॥
ಹೊಳೆಯ ದಂಡೆಯ ಹುಲ್ಲ ।
ನೊಳಿತೆಂಬ ಹಸುಗರವ ॥
ನೆಳೆವ ಮೊಸಳೆಯ ತೆರದಿ ಹವಣಿಸುವರು ॥

೪

ಹೆಣ್ಣ ನಾಶೆಗೆ ಕುಲವ ।
ಮಣ್ಣು ಗೂಡಿಸುತಿಹರು ।
ಕಣ್ಣಿದ್ದು ಕುದಿ ಸುಣ್ಣವನೆ ತಿಂಬರು ॥
ಬಣ್ಣನೆಗೆ ಬಲಿಬಿದ್ದು ।
ಅಣ್ಣಗಳು ಕುಳಿತಿಹರು ।
ಕಣ್ಣೀರ ಕಡೆಗೊಮ್ಮೆ ಸುರಿಸುತಿಹರು ॥

೫

ಬೇಕಂತೆ ನಾರಿಯೊಳು ।
ಏಕಪತಿ ಸೇವೆಯದು ।
ಏಕಪತ್ನೀವ್ರತವು ಪತಿಗಿಲ್ಲವೇ ?
ಬೇಕುಬೇಕಾದಂತೆ ।
ಕೇಕೆ ಹೊಡೆದಾಡುವರು ।
ಕಾಕುಮನುಜರಿಗೆಲ್ಲಿ ನೀತಿಯಿಹುದು ?

# ಆತ್ಮಬೋಧೆ

೧

ಕಾಮನು ಪಾಶವ ಬೀಸಿಹನಣ್ಣಾ ।
ಭೀಮನಂಥವರ ಬಿಗಿಯುವನಣ್ಣಾ ॥
ತಾಮಸವನು ನೀ ಪೊಂದದಿರಣ್ಣಾ ।
ಕಾಮ ವೈರಿಯನೆ ನೆನೆಯುತಿರಣ್ಣಾ ॥

೨

ಎಚ್ಚರವೆಚ್ಚರವೆಚ್ಚರವಣ್ಣಾ ।
ಕಿಚ್ಚು ತಣ್ಣಗಿಹುದೆನ್ನದಿರಣ್ಣಾ ॥
ಹುಚ್ಚು ತಲೆಗೆ ಗಡನೇರುವುದಣ್ಣಾ ।
ಮೆಚ್ಚಿ ಮೋಹಕೊಳಗಾಗದಿರಣ್ಣಾ ॥

೩

ಬಿದ್ದರೆ ಪಾತಾಳವೆ ಕಾಣಣ್ಣಾ ।
ಇದ್ದವರಾರೂ ಲೆಕ್ಕಿಸರಣ್ಣಾ ।
ನಿದ್ದೆಯಿಂದ ತಡವರಿಸದಿರಣ್ಣಾ ।
ಎದ್ದು ನೋಡು ದಿಟವೊಂದಿಲ್ಲಣ್ಣಾ ॥

೪

ಗಡ್ಡೆ ಗೆಣಸು ತರಗೆಲೆದಿಂದವರೂ ।
ಗಡ್ಡಮುಂಡೆಗಳ ಬಲು ಬಿಟ್ಟವರೂ ॥
ಗುಡ್ಡದೊಳಗೆ ತಪವನು ಗೆಯ್ದವರೂ ।
ದಡ್ಡರಾಗಿ ಗಣಗಣ ತಿರುಗಿಹರು ॥

೫

ಉಂಡು ಉಂಡು ದುಂಡಾಗುವುದೆಲ್ಲ ।
ಕೆಂಡವಿಟ್ಟು ಕೈಗಾಸುವುದೆಲ್ಲ ॥
ಕಂಡತುಂಬಿ ತುಣುಕಾಡುವುದೆಲ್ಲ ।
ಪುಂಡಾಟಕೆಗೆಂದೆಂದಿಗುಮಲ್ಲ ॥

೬

ಭೋಗವಿಲ್ಲದಲೆ ಸಾಗುವುದೆಲ್ಲ ।
ರೋಗವಿಲ್ಲದಲೆ ಬದುಕುವುದೆಲ್ಲ ॥
ಜೋಗಿಯಾಗಿ ಸಂಚರಿಸುವುದೆಲ್ಲ ।
ಆಗಮಾದಿಗಳ ಪಳಿವುದಕಲ್ಲ ॥

೭

ನಾನಾ ಶಾಸ್ತ್ರವ ನೋಷುವುದೆಲ್ಲ ।
ನಾನಾ ಭಾಷೆಯ ತಿಳಿಯುವುದೆಲ್ಲ ॥
ನಾನಾ ದೇಶವ ನೋಡುವುದೆಲ್ಲ ।
ಹೀನಾಚಾರವ ಮಾಡ್ವುದಕಲ್ಲ ॥

೮

ಮನವತಿ ಚಂಚಲವಾದುದು ಕೇಳು ।
ನೆನೆಯಬಾರದೆಡೆಗೋಡ್ವುದು ಕೇಳು ॥
ತನುಸುಖಕಾಶೆಯ ಮಾಡ್ವುದು ಕೇಳು ।
ಅನುದಿನವಜ್ಞಾನವಿದೇ ಕೇಳು ॥

೯

ಉಡಿಗೆಯ ಕಂಡೋಡುವುದೀ ಚಿತ್ತ ।
ತೊಡಿಗೆಯ ಕೊಂಡಾಡುವುದೀ ಚಿತ್ತ ॥
ಸಡಗರದುತ್ಸವಕೋಡ್ವುದು ಚಿತ್ತ ।
ಖಿಡದೆಲ್ಲೆಲ್ಲಿಗೊ ಪೋಪುದು ಚಿತ್ತ ॥

೧೦

ಚಳಿಮಳೆ ಬಿಸಿಲ್ಗಳ ನೋಡದು ಜೋಕೆ ।
ಸುಳಿವುದು ಮಾಯಾಲಸ್ಯವು ಜೋಕೆ ॥
ಘಳಿಲನೆ ಮರವೆಯು ಬರುವುದು ಜೋಕೆ ।
ತಿಳಿದು ತಿಳಿದು ನೀ ಬೀಳುವೆ ಜೋಕೆ ॥

೧೧

ಪೇಳುವುದೆಲ್ಲರು ಬಲ್ಲರು ಕೇಳು ।
ಪೇಳುವಂತೆ ತಾವ್ ನಡೆಯರು ಕೇಳು ॥
ಕೇಳು ಕಜ್ಜವಂ ಮಾಳ್ಪರು ಕೇಳು ॥
ಬೀಳುವರೊಮ್ಮೆಲೆ ನರಕದಿ ಕೇಳು ।

೧೨

ಮುದ್ದಿನ ಮಾತನು ಪೇಳುವೆನಿನ್ನು ।
ಬಿದ್ದು ಬೇಡಿಕೊಂಬುವೆ ಗಡನಿನ್ನು ॥
ತಿದ್ದಿಕೊ ನಿನ್ನಯ ತಪ್ಪುಗಳನ್ನು ।
ಉದ್ದನ ನರಕದಿ ಬೀಳದಿರಿನ್ನು ॥

೧೩

ಯೋಗಿಯೆಂದು ನೀ ಪೇಳುವುದೆತ್ತ ।
ಭೋಗವಿಲಾಸವ ಮಾಡುವುದೆತ್ತ ॥
ಸೋಗಿನ ವೇಷವ ಧರಿಸುವುದೆತ್ತ ।
ರಾಗದ್ವೇಷವ ಹೂಡುವುದೆತ್ತ ॥

೧೪

ಶಿಷ್ಟನೆಂದು ನೀ ನುಡಿಯುವುದೆತ್ತ ।
ಭ್ರಷ್ಟಕಾರ್ಯವಂ ಮಾಡುವುದೆತ್ತ ॥
ಇಷ್ಟವ ಸಾಧಿಸಿಕೊಳ್ಳುವುದೆತ್ತ ।
ದುಷ್ಟರ ಕೂಡೋಡಾಡುವುದೆತ್ತ ॥

೧೫

ಬುದ್ಧಿವಾದವಂ ಪೇಳುವುದೆತ್ತ ।
ಬುದ್ಧಿವಂತನೆಂದೆನಿಸುವುದೆತ್ತ ॥
ಕದ್ದು ಮುಚ್ಚಿ ನೀ ಬಾಳುವುದೆತ್ತ ।
ಹದ್ದಿನಂತೆ ಕಣ್ ಬಿಡುತಿಹುದೆತ್ತ ॥

೧೬

ತುತ್ತನು ಕಿವಿಯೊಳಗಿಡುವುದಕೊಲ್ಲೆ ।
ಮುತ್ತನು ಒಡೆದೊಡೆದೊಗೆವುದಕೊಲ್ಲೆ ॥
ಬತ್ತಲಗುಂಡಿಯೊಳಿರುವುದಕೊಲ್ಲೆ ।
ಮತ್ತೆ ಹುಚ್ಚನಾನೆನ್ನಲು ಬಲ್ಲೆ ॥

೧೭

ಜ್ಞಾನಿಯೆಂದು ಹೆಮ್ಮೆಯೊಳಿರಬೇಡ ।
ಮಾನಿಯೆಂದು ಮೌನದೊಳಿರಬೇಡ ॥
ಹೀನನೆಂದು ನೀ ಕೊರಗಲು ಬೇಡ ।
ದೀನಪಾಲ ಶಿವನೊಬ್ಬನೆ ನೋಡಾ ॥

೧೮

ಬಾಯೊಳು ಬ್ರಹ್ಮವ ನುಡಿಯಲುಬೇಡ ।
ಮಾಯೆಯ ಬಲೆಯೊಳು ಬೀಳಲುಬೇಡ ॥
ಕಾಯ ಕಷ್ಟವನು ಮರೆತಿರಬೇಡ ।
ಸಾಯೆನೆಂದು ನೀ ತಿಳಿದಿರಬೇಡ ॥

೧೯

ನಿನ್ನ ದುರ್ಗುಣವ ಮುಚ್ಚಿಡಬೇಡ ।
ಅನ್ಯರ ಸುಗುಣವ ಪಳಿಯಲುಬೇಡ ॥
ಹೊನ್ನು ಹೆಚ್ಚಿ ಕಣ್ಮುಚ್ಚಿರಬೇಡ ।
ಕುನ್ನಿಯಾಗಿ ನೀ ಹುಟ್ಟುವೆ ನೋಡಾ ॥

೨೦

ಹಿಂದು ಮುಂದೆ ಜನ ನಿಂದಿಸುತಿರಲಿ ।
ಅಂದವಾಗಿ ನುತಿಗೆಯ್ಯುತಲಿರಲಿ ॥
ಬಂದು ಘೋರ ಕಷ್ಟವ ಕೊಡುತಿರಲಿ ।
ಬಿಂದುವೊಂದು ಬಲು ಬಂದಾಗಿರಲಿ ॥

೨೧

ಇಂದ್ರಿಯ ನಿಗ್ರಹ ಮಾಡ್ವುದರಿಂದೇ ।
ಬಂದಕಷ್ಟ ದೂರಾಗುವುದಿಂದೇ ॥
ಚಂದ್ರಶೇಖರನು ಕಾಣುವ ಮುಂದೇ ।
ಮಂದಮತಿಯೆ ಸಾಧಿಸು ನೀನಿಂದೆ ॥

೨೨

ಪರಸತಿಯರು ತಾಯಿಗೆ ಸರಿಯಹರು ।
ದುರುಬಾವನೆಯುವರೊಳು ಮಾಡದಿರು ॥
ಕರಕರ ಕರಕರ ಶಿರಗೊಯ್ಯುವರು ।
ನರಕದಿ ನಿನ್ನನು ಹುದುಗಿಡುತಿಹರು ॥

೨೩

ಸೂಳೆಮಿಂಡರಿಗೆ ಮೊದಲೇ ನರಕ ।
ಕೀಳ ಖೂಳರಿಗೆ ಮೊದಲೇ ನರಕ ॥
ಬಾಳುವೆಗೆಡಕಗೆ ಮೊದಲೇ ನರಕ ।
ಮೂಳ ಮಂದಿಗೂ ಮೊದಲೇ ನರಕ ॥

೨೪

ತನುವು ರಥವು ಮನವಶ್ವವು ಕೇಳು ।
ವಿನಯದ ಸಾರಥಿಯಾತ್ಮವು ಕೇಳು ॥
ಘನತರಮಾರ್ಗವು ಧರ್ಮವು ಕೇಳು ।
ಕೊನೆಯ ತಾಣವಾ ಮೋಕ್ಷವು ಕೇಳು ॥

೨೫

ಜ್ಞಾನವೆಂಬ ಕಡಿವಾಣವನಿಕ್ಕಿ ।
ಮಾನವೆಂಬ ಕುಕ್ಕೆಯ ಮೊಗಕಿಕ್ಕಿ ॥
ಸ್ವಾನುಭವದ ಶಮೆ ಚಬಕವನಿಕ್ಕಿ ।
ಹೀನಮಾರ್ಗದಿಂದೆಳೆ ಧುಮ್ಮಿಕ್ಕಿ ॥

೩೬

ಕಂಗಳು ಶಿವನಂ ನೋಡುತಲಿರಲಿ ।
ಅಂಗೈಗಳು ಶಿವ ಸೇವೆಯೊಳಿರಲಿ॥
ಮಂಗಳಮನ ಶಿವಧ್ಯಾನದೊಳಿರಲಿ
ರಂಗರಸನೆ ಶಿವಶಿವ ಎನುತಿರಲಿ ॥

೩೭

ಮೃಡಕಥೆಯನು ಕಿವಿ ಕೇಳುತಲಿರಲಿ ।
ಒಡನೆ ಮೂಗು ಶಿವನಡಿ ಮೂಸಿರಲಿ ॥
ಅಡಿಗಳು ಶಿವಯಾತ್ರೆಯೊಳಿರುತಿರಲಿ ।
ನಡೆಯೊಳು ಕೆಡುನುಡಿ ಬರದಿರುತಿರಲಿ ॥

೩೮

ತಂದೆ ತಾಯಿಗಳ ವಂದಿಸಬೇಕು !
ಹಿಂದಿನ ಹಿರಿಯರ ಜ್ಞಾನಿಸಬೇಕು ॥
ಇಂದಿನ ಗುರುಗಳ ಪೂಜಿಸಬೇಕು ।
ಒಂದೆ ಮನದೆ ನೀ ನಡೆಯಲು ಬೇಕು ॥

೩೯

ವೇದವಾದವಂ ಮನ್ನಿಸಬೇಕು ।
ಭೇದಬುದ್ಧಿಯಂ ತ್ಯಜಿಸಲೆಬೇಕು ॥
ಆದಿತತ್ವವಂ ಶೋಧಿಸಬೇಕು ।
ನಾದಬ್ರಹ್ಮವ ಸಾಧಿಸಬೇಕು ॥

೪೦

ಗುರುಚರರಲಿ ಸಮ ಭಕ್ತಿಯೆ ಬೇಕು ।
ಗುರು ಪಂಚಾಚಾರ್ಯರ ನೆನೆಯಲೆಬೇಕು ॥
ಪರಿಪರಿ ಭ್ರಾಂತಿಯ ಕಳೆಯಲೆಬೇಕು ।
ವರವಾಗೀಶನ ಬೆರೆದಿರಬೇಕು ॥

———

# ಕ ಣ್ಣೀ ರು

೧

ಹಾ! ಯೋಗಿಯೇ ನೀನು ನಮ್ಮನೆಲ್ಲರನೀಗ ।
ಕಾಯುವುದು ಬಿಟ್ಟು ಪೋಗುವುದುಚಿತವೇ ?
ರಾಯಗುರು ನೀನಿಂತು ನಿಷ್ಕರುಣಿಯಾಗಿ ಗಡ ।
ಮಾಯವಾಗಿಹ ಕತವದೇನು ಪೇಳು ?

೨

ಗುರುವೆ! ನೀನಿರುವಾಗ ಪೊಗಳಲಿಲ್ಲವು ನಿನ್ನ।
ನರರೆ! ನಾನೋರ್ವನೇ ದುಷ್ಟಕವಿಯು ॥
ಪರಸೇವೆಯನು ಮಾಡಿ ಗುರುಸೇವೆಯನು ಮಾಡ ।
ದಿರುವ ನಾನೋರ್ವನೇ ಪಾಪಿನರನು ॥

೩

ಎನ್ನ ಸೇವೆಯ ನೀನು ಕೊಳ್ಳಪಲೆಪೋಡೆಯಾ ।
ನಿನ್ನ ಪದ ಪೂಜೆಯನೆ ಬಯಸುತಿರ್ದೆ ॥
ಮುನ್ನವೆನಗೇನೇನು ತಿಳಿಯಲಿಲ್ಲವು ನಿನ್ನ ।
ಮಾನ್ಯ ಮಹಿಮೆಯ ಪಾಡಿ ಕುಣಿಯುತಿರ್ದೆ ॥

೪

ಆರಿಗೂ ಏನೇನು ತಿಳಿಸದಲೆ ನೀನೆಲ್ಲಿ ।
ಸೇರಿರುವೆ ಗುರುರಾಯ ತಿಳಿಯದಿಹುದು ॥
ಮಾರಾರಿಯೊಲಿಸಲ್ಕೆ ಗಿರಿಗುಹೆಗಳಿರುತಿರುವ ।
ಘೋರ ವನದೊಳು ಕುಳಿತು ತಪಿಸುತಿಹೆಯಾ ?

೫

ಶಿವಯೋಗಿ ಸಾರ್ವಭೌಮನೆ! ನೀನು ಶತಕಾಲ ।
ವನನಿಯೊಳು ಬಾಳುವುದು ಉಚಿತವಿರಲು ॥
ಜವದಿಂದ ಪೋದುದೇಕಯ್ಯ ಕಲಿಯುಗದೊಳಗೆ ।
ಭವಿಜನರ ಪಾಪ ಹೆಚ್ಚಾದುದದಕೋ ?

೬

ಈಲೋಕದೊಳು ಸುಖವದಿನಿತಿಲ್ಲವೆಂದೆ ನೀ ।
ನಾಲೋಕವನು ಸೇರಿ ಮೆರೆಯುತಿಹೆಯಾ ?
ಭೂಲೋಕನಾಥ! ನಿನಗೀಪರಿಯ ಭಾವನೆಯ ।
ನಾಲೋಕನಾಥ ಶಿವನೇಕೆ ತಂದಾ ?

೭

ಗುರುಸಾರ್ವಭೌಮ ನೀನೆಮ್ಮನೀಪರಿ ಜವದಿ ।
ತೊರೆವೆ ಎಂದಾರಿಗೂ ತಿಳಿಯಲಿಲ್ಲ ॥
ತರವೆ ನಿನ್ನನೆ ನಂಬಿಕೊಂಡಿರ್ದ ಭಕ್ತರನು ।
ಮರೆದು ಕಂಬನಿಗರೆಸಿ ಮರೆಯಾದುದು ?

೮

ವೀರಶೈವರಿಗೆಲ್ಲ ನೀನೆ ದಿವ್ಯಜ್ಯೋತಿ ।
ತೋರುವೆಲ್ಲರಿಗೊಂದು ಪ್ರಾಣ ನೀನೇ ॥
ಮಾರಾರಿಸಮನಾಗಿ ಪೂಜೆಗೊಂಬುವ ಮೂರ್ತಿ ।
ಧೀರ ನೀನೋರ್ವನೇ ಶಿವಯೋಗಿಯು ॥

೯

ನೀನೆ ಪೋಗಲು ನಾವು ಕಣ್ಣಿರ್ದು ಕುರುಡರೈ ।
ಪ್ರಾಣವಿರ್ದರು ಪೆಣಗಳಾದೆವಕಟಾ!
ಜ್ಞಾನನಿಧಿಯಾದ ಶಿವಲಿಂಗವಿರ್ದರು ನಾವು ।
ಹೀನ ಬಲಹೀನ ಭವಿಯಾದೆವಕಟಾ !!

೧೦

ತಂದೆ ನೀನಿನಿತೇಕೆ ನಿರ್ದಯವ ತಾಳಿದೈ ?
ಮುಂದೊಮ್ಮೆ ಅವತರಿಸ ಪೋಗಿರುವೆಯಾ ॥
ಅಂದಿನಾ ದಾರುಕನು ನೀನಾಗಿ ಶಿವಲಿಂಗ ।
ದಿಂದ ತೋರುವೆನೆಂದು ಪೋಗಿರುವೆಯಾ ?

೧೧

ಗುರುವೆ ನೀ ದಾರುಕನೆ ಸರಿ ನಿನ್ನಪಾದಗಳು ।
ಮೆರೆದ ಭೂಮಿಯೆ ಪುಣ್ಯಮಯವಾದುದು ॥
ಕರೆದು ನೀನಾರನುಡಿಸಿದೆಯುವರ ಪಾಪಗಳು ।
ತೊರೆದೋಡಿ ಇಷ್ಟಾರ್ಥ ಸಿದ್ಧಿಸಿಹುದು ॥

೧೨

ಲೋಕದುದ್ಧಾರಕಾಗಿಯೆ ಜನ್ಮವೆತ್ತಿರ್ದೆ ।
ನೀ ಕರುಣಮಯನಾದ ಗುರುದೇವನು ॥
ಏಕೆ ನಮ್ಮನು ಬಿಟ್ಟುಪೋದೆ? ಶಿವನಾಜ್ಞೆಯೆನೆ ।
ಲೋಕ ರಕ್ಷಣೆಗಾರನಿಟ್ಟೆ ಪೇಳ್ವೈ ?

೧೩

ಶಿವನಾಜ್ಞೆಯಾದರೂ ಲೋಕರಕ್ಷಣೆಯಾಗು ।
ವವಧಿಯೊರಗೆಯು ನಾನು ಬಾರೆನೆಂದು ॥
ಅವನೀಶ! ನೀನುಳಿಯಲನುವಿದ್ದು ಶಿವಕರೆದ ।
ನೆವದೋರಿ ಪೋದುದೇ ನಿನಗಿಷ್ಟವೋ ?

೧೪

ಕಲಿಕಾಲ ಮಹಿಮೆಯೋ ಕಲಿರಾಜ ಮಹಿಮೆಯೋ ।
ಬಲಹೀನ ದೈವವೋ ತಿಳಿಯದಿಹುದು ॥
ನೆಲದೊಡೆಯ ಸಿದ್ಧಲಿಂಗನು ವೀರಶೈವರನು ।
ಸಲಹುವುದ ಬಿಟ್ಟೆಲ್ಲಿಗೋ ಪೋದನು ॥

೧೫

ಯತಿವರ್ಯ! ನೀನ್ನೋರ್ವನಿದ್ದ ಕತದಿಂದೆಮಗೆ ।
ಕ್ಷಿತಿಯೆಲ್ಲ ತುಂಬಿರ್ದುದೀಗನೋಡೆ ॥
ಪತಿಹೀನ ಸತಿಯಂತೆ ಮತಿಹೀನ ನರನಂತೆ ।
ಹಿತದ ಗುರುವಿಲ್ಲದಿಹ ಶಿಷ್ಯನಂತೆ ॥

೧೬

ಕ್ಷಿತಿಪಾಲನಿರದ ವಸುಮತಿಯಂತೆ ಸಕಲಜನ ।
ನುತನಾದ ರವಿಯಿರದ ಪಗಲಿನಂತೆ ॥
ಹತಭಾಗ್ಯನಾದ ಸಂಸಾರಿಯಂತೆಯೆ ನಮ್ಮ ।
ಗತಿಯಾಯಿತಿಳೆ ಬಟ್ಟಬಯಲಾಯಿತು ॥

೧೭

ಚಂದಿರನ ತೇಜಸ್ಸಿಗಿಂತಧಿಕ ನೀ ಭೂಮಿ ।
ಚಂದಿರನೆ ತೇಜಸ್ವಿಯೆಂದೆ ತಿಳಿದು ॥
ಇಂದು ರಾಹುವು ನಿನ್ನ ತಿಂದೆಬಿಟ್ಟನೆ ದೇವ ?
ಎಂದಿಗೂ ಇಳೆಯಂಥತಮಗಂಡಿತು ॥

೧೮

ರಾವು ಪಿಡಿಯಲು ಚಂದ್ರ ತನ್ನ ಬಿಂಬವ ತೂರಿದು ।
ಬೂವಿ ಚಂದಿರನಾದ ನಿನ್ನ ಸೇರಿ ॥
ಸಾವಧಾನದಿ ಮತ್ತೆಯುದಯ ಹೊಂದುವನೆಂದು ।
ಭಾವಿಸಿಯೆ ರಾವು ನಿನ್ನನು ಪಿಡಿದನೋ ?

೧೯

ಹಾ ! ಜಗದ್ಗುರುವೆ ನಿನ್ನುಪದೇಶವೆಂತಹದು !
ಪೂಜೆ ಜಪ ಶಿವಯೋಗನಿಷ್ಠೆಯೆಂತು !!
ಮೂಜಗವೆ ನಿನ್ನ ಮಹಿಮೆಯ ಪೊಗಳುತಿರಲೀಗ ।
ಲೀಜನವ ಬಿಟ್ಟು ಪೋಗುವುದುಚಿತವೇ ?

೨೦

ನಿನ್ನುಭಯ ಹಸ್ತಗಳ ಪುಣ್ಯಪದಯುಗ್ಮಗಳ ।
ನಿನ್ನಾದರೀ ಕಣ್ಣು ನೋಡುತಿಹವು ॥
ನಿನ್ನಮೃತವಾಣಿಯೇ ಕೇಳುವುದು ಕಿವಿಗಳ್ಗೆ ।
ನಿನ್ನ ಪಾವನ ತನುವ ಮನ ನೆನೆವುದು ॥

೨೧

ಗುರುವೆ! ನಿನ್ನನು ಕಂಡ ಕಣ್ಣೆರಡು ದುಃಖದಿಂ ।
ಕರೆದ ನೀರದು ದೊಡ್ಡ ಕೆರೆಯಾದುದೋ?
ಕೆರೆಯೊಡೆದು ಸರವಾಗಿ ಬಲುದೊಡ್ಡ ಮಡುವಾಗಿ ।
ಕರಗುಕೊರಗಿಲ್ಲದಿಹ ಕಡಲಾದುದೋ?

೨೨

ಪಂಚಗುರುಗಳು ಕಣ್ಗೆ ಬೇರೆಯಾಗಿರ್ದರೂ ।
ಸಂಚಯವು ನೀನೋರ್ವನವರಿಗೆಲ್ಲಾ ॥
ಪಂಚಗುರು ರೂಪ ನೀನೋರ್ವನಾಗಿರ್ದು ಪ್ರ ।
ಪಂಚವನು ತೊಲಗಿದುದು ಯೋಗ್ಯವಹುದೆ?

೨೩

ಗುರು ಜಂಗಮರಿಗೆಲ್ಲ ಚಕ್ರವರ್ತಿಯು ನೀನು ।
ಚರವರಾ! ನೀನೆಂತು ತಿಳಿಯದಿರುವೆ?
ಅರರೆ! ನಮ್ಮೆಲ್ಲರನು ಬಿಟ್ಟು ಬಯಲಾದೆಯಾ?
ನರರು ನಾವಿನ್ನಾರ ಮರೆಬೀಳ್ವುದು?

೨೪

ನೀನೆ ಮರೆಯಾದಮೇಲೇನು ಸಂಕ್ರಮಣವೈ!
ನಾನುಂಬುವಮೃತಾನ್ನ ವಿಷವೆ ಸರಿಯು ॥
ಮಾನಿಸುವ ಸಂಕ್ರಮಣದೆಳ್ಳು ಬೆಲ್ಲಗಳಿಂದು ।
ಹೀನ ಹಾಲಾಹಲವೆ ಸರಿಯು ಸರಿಯು ॥

೨೫

ಅಕ್ಕರದ ದೇವ! ನೀನುಕ್ಕಿಪೋದುದ ಕೇಳಿ ।
ದಿಕ್ಕೆ ತೋರದೆ ಹೋಯ್ತು ಸರ್ವಜನಕೆ ॥
ಮುಕ್ಕಣ್ಣ ಸಲಹೆಂಬ ನುಡಿಯೊಡನದೆಲ್ಲಿಯೂ ।
ಬಿಕ್ಕೆ ಬಿಕ್ಕಳುವುದೇ ಹೆಚ್ಚಾಯಿತು ॥

೨೬

ಉಜ್ಜಯನಿಗೀಶನೇ ! ಸಿದ್ಧಲಿಂಗೇಶನೇ !
ಸಜ್ಜನೋದ್ಧಾರಿ ನೀನೆತ್ತಪೋದೆ ?
ಹೆಜ್ಜೆ ಹೆಜ್ಜೆಗು ಸಿದ್ಧಲಿಂಗ ನಾಮವ ನೆನೆವ ।
ಸಜ್ಜನವ ತೊರೆದು ನೀನೆತ್ತಪೋದೆ ?

೨೭

ನೀನಗಲಿ ಪೋದುದಕೆ ಯಾರಿಗೂ ಸೊಗಸಿಲ್ಲ ।
ಜ್ಞಾನನಿಧಿ ನೀನಿಂತು ಪೋದುದೊಳಿತೇ ?
ಏನು ಮಾಡುವುದು ? ಶಿವನಾಜ್ಞೆಯಾಗಿದ್ದಿತೆನೆ ।
ನಾನೆಂತು ಸಹಿಸುವುದು ಶಿವಭಕ್ತನು ?

೨೮

ಶಿವನಾಜ್ಞೆಗಿಂತಲೂ ಶಿವಭಕ್ತ ಬಿನ್ನಣವು ।
ಅವನಿಯೊಳಗಧಿಕವಾಗಿಹುದು ಗುರುವೇ !
ಅವರಿಷ್ಟಗಳ ನೀನು ಪೂರಯಿಸದೆಲೆ ಹೇಗೆ ।
ಜವದಿ ಶಿವಲೋಕವನು ಸೇರ್ದೆ ಪೇಳೈ ?

೨೯

ನಿನ್ನ ಸಂಕಲ್ಪ ಶಿವಭಕ್ತ ಸಂಕಲ್ಪಗಳು ।
ಇನ್ನು ನೆರವೇರಬೇಕಾಗಿರ್ದವೈ !
ಮಾನ್ಯ ಮಹಿಮನೆ ನೀನಿವೆಲ್ಲವನು ಮರೆತೆಂತು ।
ಉನ್ನತೋನ್ನತ ಲೋಕವನು ಸಾರ್ದೆಯೈ ?

೩೦

ಇನಿತು ಬೇಗನೆ ಪೋದುದಂ ನಾನದೆಂದಿಗೂ ।
ಅನುಮತಿಸಲಾರೆನೈ ! ಗುರುರಾಯನೇ ॥
ಸನುಮತಿಸಿ ಲೋಕ ರಕ್ಷಣೆಗಾಗಿ ಬಾರಯ್ಯ !
ಅನವರತ ನಿನ್ನನೇ ನೆನೆಯುತಿರುವೆ ॥

೩೧

ಆಗಲೇ ನಿನಗೆ ಸಲ್ಲಿಹುದು ಜಗದುದ್ಧಾರ ।
ವೀಗ ಕೈಲಾಸವನು ಸೇರ್ದರೇನು ?
ಬೇಗನೇ ದಿವ್ಯ ದೇಹವ ಧರಿಸಿಕೊಂಡು ನೀ ।
ನೀಗಲೆಲ್ಲೆಲ್ಲಿಯೂ ತೋರು ತೋರು ॥

೩೨

ಶಿವಯೋಗಿವರ್ಯನೇ! ಭವರೋಗವೈದ್ಯನೇ!
ಅವಧರಿಸು ನಿನ್ನ ದಾಸನ ಮಾತನು ॥
ಶಿವಮತೋದ್ಧಾರ ಭಕ್ತೋದ್ಧಾರಗಳನೀಗ ।
ಲವನಿಯೊಳು ಮಾಡ್ವುದಕೆ ಬೇಗ ಬಾರೈ !

೩೩

ಎನ್ನ ಬೇಡಿಕೆಯ ನೀ ಧಿಕ್ಕರಿಸಬೇಡಯ್ಯ ।
ನಿನ್ನನೊಂದು ಕ್ಷಣವು ಆಗಲಲಾರೆ ।
ಇನ್ನು ತಡಮಾಡದಲೆ ಉದಯಿಸೈ ಯತಿರಾಯ ।
ನಿನ್ನ ಸದ್ಧರ್ಮವನು ಹರಡುವುದಕೆ ॥

೩೪

ಕವಿವರ್ಯ ಕಾಶಿನಾಥನ ಪ್ರಾಣನೀನಯ್ಯ ।
ಶಿವಭಕ್ತರೆಲ್ಲರಿಗೆ ಪ್ರಾಣದಾತಾ ॥
ಶಿವಮತೋದ್ಧಾರಕ ಚಕ್ರವರ್ತಿಯು ನೀನು ।
ಶಿವನೆಂಥ ನಿಷ್ಕರುಣಿ ನಿನ್ನನೊಯ್ದಾ !

೩೫

ಮರೆಯದಿರು ಮರೆಯದಿರು ಕೈಬಿಟ್ಟು ಪೋಗದಿರು ।
ತರಳರೊಳು ಕರುಣೆಯಿಂ ತಿರುಗಿಬಾರೈ ॥
ಸರಗಟ್ಟಿ ಪರಿವ ಕಣ್ಣೀರ ನೀನೊರಸಯ್ಯ ।
ವರ ವೀರಶೈವರರಸೊರ್ವ ನೀನು ।

————

# ಸಂಕಟಹರ ತತ್ತ್ವಮಾಲೆ

೧

ನಂದಿಯು ಕುಂಭಜಗೊರೆದಂ ।
ನಂದನ ಶುಕಗೊರೆದನಾ ಮಹರ್ಷಿ ವ್ಯಾಸಂ ॥
ಅಂದದೊಳದನೇ ವಿಬುಧರ ।
ಮುಂದಿರಿಸುವೆ ಪಠಿಸಿ ಸುಖಿಸಲೆಲ್ಲರುಮಿಳೆಯೊಳ್ ॥

೨

ಲೋಮಶ ಋಷಿಯೊರದುದನೇ ।
ಪ್ರೇಮದೆ ಪೇಳುವೆನು ಸರ್ವಹಿತಮತಿಯಿಂದ ॥
ತಾಮಸವನು ತೊರೆದವರಿದ ।
ನೇಮದೆ ಪಠಿಸಿದರೆ ಸಕಲ ಸಿದ್ಧಿಗಳಹವೈ ॥

೩

ಗುರುವು ದೇವೇಂದ್ರುಂಗೆ ಕರುಣೆಯಿಂದೊರೆದುದನು ।
ಸರಗೊಳಿಸಿ ಪೇಳುವೆನು ಹಿತಕಾಗಿಯೆ ॥
ನರರಿದನು ಹರಭಕ್ತಿಯಿಂ ಪಠಿಸೆ ಸುಖಗೊಂಡು ।
ವರಮುಕುತಿಯಂ ಪಡೆವರಿದು ನಿಚ್ಚಯಂ ॥

೪

ಶಿವನು ಯಮರಾಜಗೊರೆದುದನೀಗ ಪೇಳುವೆನು ।
ಅವಧರಿಸುವುದು ಸಕಲ ವಿದ್ವಾಂಸರು ॥
ಭವಭಯವು ಕಳೆಯುವುದು ಭಾಗ್ಯವಪ್ಪುದು ದೇವ ।
ಕವಿಜನರು ಪೊಗಳುತಿಹ ಕೀರ್ತಿಬಹುದು ॥

೫

ಪರರ ದಾರೆಯರ ನಿಜಮಾತೃವೆಂದೆಣಿಸುತ್ತ ।
ಪರಮ ಪಂಚಾಕ್ಷರೀ ಮಂತ್ರಸಹಿತಂ ॥
ಗುರುವಿನಿಂ ಶಿವದೀಕ್ಷೆ ಪೊಂದಿ ಪಠಿವಾದವಂ ।
ತೊರೆದು ಸುಖಿಸುವ ನರರೆ ಮುಕ್ತರಹರು ॥

೬

ಶಿವನೆ ಸೃಷ್ಟಿಸುವನಾಶಿವನೆ ರಕ್ಷಿಸುವನೈ ।
ಶಿವನೆ ತನ್ನೊಳು ಜಗಪ ಲಯಗೊಳಿಪನು ॥
ಶಿವನ ಅಂಶವು ಜಗವು ಜಗವು ಶಿವನಂಶವೈ ।
ಶಿವನೆ ವೇದಾಂತಮಯ ಪರಮಾತ್ಮನು ॥

೭

ಆವುದರ ಶಕ್ತಿಯಿಂದೀ ಲೋಕವಾದುದೋ ।
ಆವುದರ ಕೃಪೆಯಿಂದ ಸುಖಿಸುತಿಹುದೋ ॥
ಆವುದರ ಗರ್ಭದೊಳು ಲೀನವಾಗಿಹುದದನೆ ।
ಜೀವಶಿವರೈಕ್ಯತೆಯ ಲಿಂಗವೆನುವರ್ ॥

೮

ಪರಮ ಶಿವಲಿಂಗವದು ನಿರ್ಗುಣವು ನಿರುಪಮವು ।
ಪರಶಕ್ತಿಯೂ ನಿರ್ಗುಣೆಯು ಶಾಶ್ವತೆ ॥
ಹರಶಕ್ತಿಯರ ಯೋಗವೇ ಸಗುಣ ವಿಶ್ವವಿದು ।
ಚರವಚರವಾಗಿ ಕಂಗೊಳಿಸುತಿಹುದು ॥

೯

ಒಂದಧುವೆ ಶಿವಲಿಂಗವಾತ್ಮವೆನಿಸಿತು ಮತ್ತೆ ।
ಯಂದವಿರದಾ ನಿರಂಜನವೆನಿಸಿತು ॥
ಮುಂದೆ ತನ್ನಯ ತ್ರಿಗುಣಮಯಿ ಶಕ್ತಿಯೊಡಗೂಡು
ತಂದವಹ ಲೋಕವನು ಪೊರಗೆಡವಿತು ॥

೧೦

ಮೂರು ಗುಣಗಳ ತನ್ನೊಳಿರಿಸಿಕೊಳಲೀ ಜಗಕೆ ।
ತೋರುವುದು ನಿರ್ಗುಣಾತ್ಮಕಮಾಗಿಯೇ ॥
ನೀರುಗುರುಳೆಯ ತೆರದೆ ತೋರಡಗುವೀಜಡವ ।
ಸೇರಲೊಡನಾಲಿಂಗ ಸಗುಣವಹುದು ॥

೧೧

ಶಿವನ ಶಿವಲಿಂಗರೂಪನನದಕೆ ಪೂಜಿಪುದು ।
ಭುವಿಯೊಳಿಹ ನರನಾಮಕರು ಸರ್ವರೂ ॥
ಭವವಿಮೋಚನವಹುದು ಸುಜ್ಞಾನವೊದಗುವುದು ।
ಶಿವನೊಡನೆ ಸಾಮರಸ್ಯವು ದೊರೆವುದು ॥

೧೨

ಕರದ ಶಿವಲಿಂಗವಾ ಶ್ರೀಶೈಲಜನ್ಯವೋ ।
ವರಪದುಮರಾಗ ಮರಕತ ರಚಿತವೋ ॥
ಪರಮ ಮಂಗಲ ಚಂದ್ರಕಾಂತದಚ್ಛಸ್ಫಟಿಕ ।
ನಿರುಮಿತವೊ ನರ್ಮದೋದ್ಭವವೊ ಶ್ರೇಷ್ಠಂ ॥

೧೩

ಊರ ಹೊರಗಿನ ಲಿಂಗಮೂರಲಿಂಗಕೆ ಮಿಗಿಲು ।
ಘೋರವನಲಿಂಗ ಮಾಲಿಂಗಕಿಂತಂ ।
ನೂರುಗುಣಮಿಗಿಲು ಗಿರಿಲಿಂಗಮಾಲಿಂಗದಿಂ ।
ವೀರಗುರು ಕರಕಿತ್ತ ಶಿವಲಿಂಗವು ॥

೧೪

ಉದುಭವಲಿಂಗಂ ಸ್ಥಾಪಿತ ।
ಮದುಭುತಲಿಂಗಂ ಸುರಾದಿ ನಿರ್ಮಿತಲಿಂಗಂ ॥
ಸದುಗುರುದತ್ತಂ ಲಿಂಗಂ ।
ಬುಧಜನರರ್ಚನೆಯೋಗ್ಯಮಪ್ಪುದು ಧರೆಯೊಳ್ ॥

೧೫

ಜನದೊಳು ನಿರ್ಜನದೊಳು ಮಾ ।
ಘನತರುವೃಂದದೊಳು ಘೋರ ವಿಪಿನಾಂತರದೊಳ್ ॥
ಅನುದಿನವೆಲ್ಲಾದರುಮೇಂ ।
ಮನುಜರು ಶಿವಲಿಂಗ ಪೂಜೆಯಂ ಚರಿಸುವುದೈ ॥

೧೬

ಹರಮಹಾದೇವ ! ಸಲಿಸೆಂದು ಪಂಚಾಮೃತವ ।
ಸುರಿದು ಪಾದ್ಯಾದಿಗಳನೆರೆದು ಬಳಿಕ ॥
ಪರಮ ಶಿವಲಿಂಗಮಂ ಜಲಧಾರೆಯೊಡನಾತ್ಮ ।
ಕರದೆ ರುದ್ರಾಭಿಷೇಕದೆ ಯಜಿಪುದು ॥

೧೭

ಭಸಿತ ಸಿರಿಗಂಧವಕ್ಷತ ಬಿಲ್ವಪತ್ರಗಳು ।
ಕುಸುಮ ಧೂಪಂ ದೀಪನೈವೇದ್ಯವು ॥
ಹಸನವಹ ತಾಂಬೂಲ ದಕ್ಷಿಣಾದಿಯ ಶಿವನಿ ।
ಗೆಸಗುವುದು ಉಪಚಾರಷೋಡಶವನು ॥

೧೮

ನೆಲಸುಗಂಧಿಯು ಬೆಟ್ಟದಾವರೆಯು ತಾವರೆಯು ।
ನೆಲದ ಸಂಪಿಗೆಯು ಸುರಗಿಯು ಹೊನ್ನೆಯು ॥
ಬಲು ಬಿಳಿಯ ಮಾಧವಿಯು ಗಿರಿಮಲ್ಲಿಗೆಯ ಮೊಗ್ಗು ।
ಚಲುವ ದಾಸಾಳ ಬೆಳಗಿನ ಪೂಜೆಗೆ ॥

೧೯

ಪಾದರಿಯು ದತ್ತೂರಿ ಸೂರ್ಯಪಾನಂ ಮತ್ತೆ ।
ಕೇದಿಗೆಯು ಪೊಂದಾವರೆಯು ತುಂಬಿಯು ॥
ತೋದಕಲ್ಹಾರಮಂ ಮೂದಳದ ಬಿಲ್ವಂಗ ।
ಳಾದಿ ಶಿವಲಿಂಗದಾ ಪೂಜೆಗಿರಲಿ ॥

೨೦

ನೀಲಕುಸುಮಂ ಜಾಜಿಮಲ್ಲಿಗೆಯು ಜಾಜಿಯುಂ ।
ಕೋಲುಮಲ್ಲಿಗೆ ದುಂಡುಮಲ್ಲಿಗಗಳು ॥
ಹಾಲಿವಣ ಸೇವಂತೆ ಚಂಡುಹೂ ಕುಸುಬೆಹೂ ।
ಕಾಲಹರನೆರಡನೆಯ ಪೂಜೆಗಿರಲಿ ॥

೨೧

ಬೆಳಗಿನಾ ಮಧ್ಯಾಹ್ನದಾ ಸಂಜೆಯರ್ಚನೆಗೆ ।
ನಳನಳಿಪ ಕಮಲ ಪುನ್ನಾಗ ಬಕುಳಂ ॥
ಬಿಳಿಯ ಎಕ್ಕೆಯು ನಾಗಕೇಸರವು ಕಣಗಿಲವು ।
ಜಲಸುಗಂಧಿಯು ಸಂಪಿಗೆಯು ಯೋಗ್ಯವು ॥

೨೨

ಕೇವಲ ಶಿವಮಂತ್ರದೆ ಸಂ ।
ಪ್ಲಾವಿತ ಭೂತಿಯನೆ ಪಣೆಯೊಳೆಲ್ಲೆಡೆಯೊಳಗುಂ ॥
ಮೂವೆರಳಾಗಿಡುವುದು ಸಂ ।
ಭಾವಿತರಿಹಪರದ ಸುಖವನಿಚ್ಛಿಪ ಮನುಜರ್ ॥

೨೩

ಕಪಿಲೆಯ ಗೋಮಯಮಂ ತಂ ।
ದುಪರಿಸ್ಥಾನದೊಳೆ ಶುಷ್ಕಮಾಗಿಸಿ ದಹಿಸಲ್ ॥
ಜಪತಪ ಮೊದಲಾದುದರೊಳು ।
ಸಫಲತೆಯಂ ತೋರೆ ಭೂತಿನಾಮದೆ ಮೆರೆಗುಂ ॥

೨೪

ಭೂತಿಯನು ಧರಿಸಲ್ಕೆ ಭೂತಭಯವಳಿಯುವುದು ।
ಖ್ಯಾತಿಗೊಳ್ಳುವನವನು ಮೂಲೋಕದೊಳ್ ॥
ಪಾತಕವನವನಳಿದು ನೀತಿಕೋವಿದನಾಗಿ ।
ಭೂತಪತಿಯಹ ಶಿವನ ಬಳಿಯೊಳಿಹನು ॥

೨೫

ಆರ ಪಣೆಯೊಳು ಮೂರು ಬೆರಳಾದ ಭೂತಿಯಿದು ।
ತೋರುವುದೊ ಮತ್ತಾರ ಕರದಿ ಲಿಂಗಂ ॥
ವೀರಭಕುತರು ವೀರಶೈವರವರೆನಿಸುವರು ।
ಘೋರ ದುರಿತವು ಕಳೆವುದವರ ನೋಡೆ ॥

೩೬

ಆರು ಶಿವಲಿಂಗವುಂ ರುದ್ರಾಕ್ಷವುಂ ಮತ್ತೆ ।
ಸಾರತರ ಭೂತಿಯುಂ ದರಿಸುತಿಹರೋ ॥
ಮಾರಹರನವರ ಕುಲಕೋಟಿಯುಂ ತನ್ನಡಿಯ ।
ಸೇರಿಸುತ ಸುತರಂತೆ ಪಾಲಿಸುವನು ॥

೩೭

ದಾನದೊಳು ಮಾನದೊಳು ತೀರ್ಥದ ಸ್ನಾನದೊಳು ।
ಜ್ಞಾನನಿಧಿ ಶಿವನರ್ಚನಾದಿಗಳೊಳು ॥
ಮಾನವನು ಸರ್ವದಾ ರುದ್ರಾಕ್ಷಗಳ ಧರಿಸೆ ।
ತಾನೆ ಪುಣ್ಯದರಾಸಿಗೊಡೆಯನಹನು ॥

೩೮

ಒಂದು ಮೊಗದಿಂದ ಪದಿನಾರು ಮೊಗದನಕವೂ ।
ಚಂದವಹ ರುದ್ರಾಕ್ಷಗಳು ದೊರೆವವು ॥
ಒಂದು ಮೊಗದೈದು ಮೊಗದೆರಡು ರುದ್ರಾಕ್ಷಗಳು ।
ಕುಂದುಕೊರತೆಯ ಕಳೆಯಲುತ್ತಮಗಳು ॥

೩೯

ಏಕಮುಖದೊಂದು ರುದ್ರಾಕ್ಷವುಂ ಶಿಖೆಯಲ್ಲಿ ।
ಜೋಕೆಯೊಳು ಧರಿಸುತಿಹ ನರಪುಂಗವಂ ॥
ಬೇಕಾದ ಸುಖವನಿಳೆಯೊಳು ಪೊಂದಿ ಕೊನೆಗೆ ತಾ ।
ನೇಕ ಶಿವನಾಗಿ ಶಿವನಡಿಯೊಳಿಹನು ॥

೪೦

ಜಪಗಳಿಂ ತಪಗಳಿಂ ನಿತ್ಯನೇಮಂಗಳಿಂ ।
ಅಪರಿಮಿತ ದಾನ ಸನ್ಮಾನಂಗಳಿಂ ॥
ವಿಪುಲ ಯಶವಾಂತರೇಂ ? ರುದ್ರಾಕ್ಷಧರಿಸದೊಡೆ ।
ವಿಫಲವಪ್ಪುದು ಸರ್ವಶುಭ ಕರ್ಮವು ॥

೩೦
ಆವನು ಪರಕೃತ ಪರಶಿವ ।
ಸೇವೆಯ ಪೂಜೆಯನು ಕಂಡು ಸಂತೋಷಿಸುವಂ ॥
ದೇವದಯಾಶೀರ್ಬಲದಿಂ ।
ದಾವಗಮಾತ್ಮಾನುಕೂಲ ಫಲವಂ ಪಡೆವಂ ॥

೩೧
ದೇವರಗುಡಿಯೊಳು ಮಠದೊಳು ।
ಭಾವುಕತನದಿಂದ ಶಕ್ತಿನೀರದ ತೆರದಿಂ ॥
ಜೀವಿಯು ಕಾರ್ತಿಕದೊಳು ಸ ।
ದ್ಭಾವನೆಯಿಂ ದೀಪಮಾಲೆಯಂ ರಚಿಸುವುದೈ ॥

೩೨
ಕುಸುಬೆಯ ಎಣ್ಣೆಯ ದೀಪವ ।
ಶಶಿಧರಗರ್ಪಿಸುವ ಮನುಜರೆಲ್ಲರು ಬೇಗಂ ॥
ಕುಸುಮಶರಾರಿಯ ಕೃಪೆಯಿಂ ।
ವಸುಧಿಪಸಮರಾಗಿ ಸುಖದೆ ಬಾಳುವರನಿಶಂ ॥

೩೪
ಅಗಸಿಯ ಎಣ್ಣೆಯ ದೀಪವ ।
ಮೃಗಧರ ಶಿವಗರ್ಪಿಸಲ್ಕೆ ಕೈಲಾಸದೊಳುಂ ॥
ಸೊಗಸೆನಿಸುವ ಸುಖಮಲ್ಲದೆ ।
ಜಗದೊಡೆಯನ ಮುಂದೆ ದೊರೆವುದುತ್ತಮವಾಸಂ ॥

೩೫
ಹರಗೆ ಹರನಾಲಯದೊಳೆಳ್ಳೆಣ್ಣೆ ದೀಪಗಳ ।
ನುರಿಸಲಜ್ಞಾನಿಯೂ ಜ್ಞಾನಿಯಹನು ॥
ದುರಿತಕೋಟಿಯ ನೀಗಿ ತನ್ನ ಶತಕುಲದೊಡನೆ ।
ಹರಪುರವ ಸೇರಿ ಸುರಸಮನಪ್ಪನು ॥

೩೬

ದೀಪದೊಳು ಮಿಗಿಲು ತುಪ್ಪದ ದೀಪವಿದನೀಗ ।
ಶ್ರೀ ಪರಮಶಿವಗೆ ವರಭಕ್ತಿಯಿಂದಂ ॥
ತಾಪವನು ಕಳೆಯೆಂದು ಬೆಳಗೆ ಕುಲಲಕ್ಷದೊಡ ।
ನಾಪರಮ ಕೈಲಾಸವನೆ ಸೇರ್ದ್ವನು ॥

೩೭

ಎಲ್ಲಿಯವರೆಗಾದೀಪಗ ।
ಳುಲ್ಲಾಸಂಗೊಂಡು ಮೆರೆವವಲ್ಲಿಯವರೆಗುಂ ॥
ಬಲ್ಲಿದ ಸಾವಿರ ಯುಗದೊಳ ।
ಗೊಲ್ಲೆನೆ ಸ್ವರ್ಗಾದಿಸೌಖ್ಯಮಿವರಂ ಬಿಡದೈ ॥

೩೮

ಪರಶಿವಗೆ ಕರ್ಪೂರದೀಪಮಂ ಧೂಪಮಂ ।
ತರತರದ ಕಸ್ತೂರಿ ಬತ್ತಿಗಳನುಂ ॥
ನೆರೆಸಮರ್ಪಿಸುತ ದಿನದಿನಮರ್ಚಿಸಲ್ಕವರು ।
ಪರಶಿವನ ಸಾಯುಜ್ಯವನೆ ಸೇರ್ಕರು ॥

೩೯

ಒಮ್ಮೆರಡು ವೇಳೆಯೋ ಮೂರು ವೇಳೆಯೋ ತಮ್ಮ ।
ತಮ್ಮ ಕರದಿಷ್ಟಲಿಂಗವ ಭಕ್ತಿಯಿಂ ॥
ಬೊಮ್ಮನಿವನೆಂದು ಪೂಜೆಯ ಮಾಡಲವರಾಗ ।
ಲೊಮ್ಮೆಗೆನೆ ರುದ್ರರೂಪಿಗಳಪ್ಪರು ॥

೪೦

ಮೂರು ಸಮಯದೊಳು ಶಿವಲಿಂಗಕ್ಕೆ ನೀರೆರೆದು
ತೋರುತಲೆ ಗಂಧಪುಷ್ಪಾದಿಗಳನುಂ ॥
ವೀರ ಭಕುತಿಯೊಳು ಪೂಜಿಸಿ ಸಂಜೆಗೊಮ್ಮೆ ತ ।
ಮ್ಮೂರ ಶಿವಲಿಂಗದರ್ಶನ ಕೊಂಬುದು ॥

೪೧

ಶಿವನಿಂಗಿಂ ಮಿಗಿಲಾದು ದೊಂದಿಲ್ಲವೀ ವಿಶ್ವ ।
ಶಿವಶಕ್ತಿಮಯವು ಶಿವಸಂಜಾತವು ॥
ಶಿವರಕ್ಷಿತವು ಮತ್ತೆ ಶಿವಲೀನವಹುದಾಗಿ ।
ಶಿವನನೇ ಪೊಗಳುವವು ಶಾಸ್ತ್ರಂಗಳು ॥

೪೨

ಶಿವನೆರಡಕ್ಕರ ಪೆಸರಂ ।
ಶಿವಭಕುತರದೇಕೆ ಸರ್ವರಾಡುವುದುಚಿತಂ ॥
ಶಿವನನು ನೆನೆವೊಡೆ ಮನುಜರ ।
ಭವಭಯವಳಿಯುವುದು ಮುಕುತಿ ಕರಗತವಹುದೈ ॥

೪೩

ಶಿವನೆ ಸುಖಗಳನೀಯ್ವನದಕೆ ಶಂಕರನಾದ ।
ನವನೆ ಶಂಭುವು ಶುಭವನೀಯ್ವನದರಿಂ ॥
ಶಿವನೆ ಸರ್ವಾಶ್ರಯನು ಸರ್ವನೆನಿಸಿದನದಕೆ ।
ಶಿವನ ಪೆಸರುಗಳಿಂತು ಸಾರ್ಥಕಗಳು ॥

೪೪

ಪಾಪಕೊನೆಗಂಡಿರಲು ಪುಣ್ಯಕೃತಿ ಹೆಚ್ಚಿರಲು ।
ಆ ಪರಮಧರ್ಮದೊಳು ಮತಿಯೋಡ್ವುದು ॥
ಪಾಪಹರ ತೀರ್ಥಾವಗಾಹನದೊಳಿಚ್ಛೆಯಹು ।
ದೀ ಪರಿ ಕ್ಷೇತ್ರದರ್ಶನದೊಳಹುದು ॥

೪೫

ಜನುಮ ಜನುಮವ ತಿರುಗಿ ಕೊನೆಗೆ ಶಿವಭಕುತಿಯಹು ।
ದನುವು ದೊರೆಯಲು ಶಿವನನೇ ಯಜಿಪುದು ॥
ಮನಸಿನೊಳು ಶೂದ್ರಶ್ವಪಚಾದಿ ಭಾವನೆಯ ತಾ ।
ನಿನಿಸು ತರಲಾಗದದು ಜೀವಕಿಲ್ಲಂ ॥

೪೬

ಇಂದು ಶಿವನರ್ಚನೆಯ ಪಾದಸಂಸ್ಪರ್ಶನೆಯು ।
ನಂದವಹ ದರ್ಶನವ ವಂದನೆಯನೂ ॥
ಸಂದೆಗವನಳಿದು ಭಜನೆಯ ಮಾಡಿದರೆ ತಾನು
ಮುಂದೆ ಘನಪದವಿಯನು ಪಡೆಯುತಿಹನು ॥

೪೭

ಪರಮ ಭಕ್ತಿಯೊಳು ಜಲ ಫಲ ಗಂಧ ಪುಷ್ಪಗಳ ।
ಹರಗಿಡುವ ಕುರುಡ ಕುಂಟರು ಮೂಕರು ॥
ಕಿರಿಯ ಜನರಂತ್ಯಜರು ಶ್ವಪಚಾದಿಗಳು ಕೂಡ ।
ಪರಮಗತಿಯನು ಕಾಂಬರಿದು ನಿಶ್ಚಯಂ ॥

೪೮

ಶಿವನ ಬಿಡುವೊಡೆ ಸರ್ವಮು ಶಿವಮಪ್ಪುದು ಜಗದಿ ।
ಶಿವಗೆ ಪರತರಮಾದುದಿಲ್ಲವಿಲ್ಲಂ ॥
ಶಿವನನಾಲಿಂಗರೂಪನ ಮಹಾದೇವನಂ ।
ಭವನಿವಾರಣೆಗಾಗಿ ಪೂಜಿಸುವುದು ॥

೪೯

ಆಡಿದುದ ಮಾಡುವುದದೆಲ್ಲರಿಗು ಫಲಕಾರಿ ।
ರೂಢಿಯೊಳು ಧರ್ಮಕರ್ಮಾದಿಗಳಿಗೆ ॥
ಬೇಡಿದರು ಕೈಬಿಡದ ಕಡುಲೋಭಿಗಳು ಶಿವನ ।
ನೋಡರಿದು ದಿಟವಾದ ಗುರುವಾಕ್ಯವು ॥

೫೦

ಮನವು ಪರಮನನವ ತಿಳಿಯುವುದು ತನ್ನಾತ್ಮ ತಾ ।
ನನುಭವದೆ ತಿಳಿಯುವುದು ಪರಮಾತ್ಮವಂ ॥
ಘನವೆನಿಸುವಾತ್ಮವೇ ಶಿವನಾಗಿ ಸಕಲಜನ ।
ತನುವಿನೊಳು ಹೃತ್ಪದ್ಮದೊಳಗಿರುವನು ॥

೫೧

ಶಿವನನೆ ಭಜಿಪುದು ಯಜಿಪುದು ।
ಶಿವನನೆ ಪರಮಾರ್ಥವಿದರು ಚಿಂತಿಪುದೆದೆಯೊಳ್ ॥
ಶಿವನಿರುವೆಡೆಯೊಳೆ ಜೀವಂ ।
ಶಿವನಿರುವಂ ಜೀವದೆಡೆಯೊಳವನೇ ಬೊಮ್ಮಂ ॥

೫೨

ಹರಿಹರ ಬ್ರಹ್ಮರನು ಸಗುಣರನ್ನಾಗಿಯೇ ।
ಕರೆಯುವುದು ವೇದವಾ ಶಿವಲಿಂಗವುಂ ॥
ನಿರುತ ನಿರ್ಗುಣವನಾಗಿಯೆ ಕರೆವುದದಕಾಗಿ ।
ಚರವಚರವೆಂಬುದೆಲ್ಲವು ಸಗುಣವು ॥

೫೩

ಶಿವನೆ ನಿತ್ಯನು ಸತ್ಯನಾತ್ಮಸಂಸ್ಥನು ಮತ್ತೆ ।
ಭವಹರನು ಜಂಗಮಾತ್ಮಕನೇಕನು ॥
ತವೆ ವಿಚಾರಿಸೆ ನಿರ್ವಿಕಲ್ಪ ನಿರ್ಮಾಯನುಂ ।
ಕವಿಗಳಿಗೆ ಬಹುವಿಧನು ಕೂಟಸ್ಥನು ॥

೫೪

ಮರೆದು ತಮ್ಮಾತ್ಮವನು ಹೊರಗಿನೀ ಚಿತ್ರವನೆ ।
ನರರು ಸಂಸಾರಿಗಳು ನೋಡುತಿಹರು ॥
ಪೊರೆವ ಪುಟ್ಟಿಸುವ ಸಂಹರಿಪ ಕೃತ್ಯಂಗಳ್ಗೆ ।
ಪರಮಶಿವನಾಶಕ್ತಿಯುತನೆ ಮೂಲಂ ॥

೫೫

ಸುರನರರು, ಪಶುಪಕ್ಷಿ, ಕ್ರಿಮಿಕೀಟ, ಜಲಚರವು ।
ತರುವೆನಿಪ ಭೇದವಿದು ಕರ್ಮಫಲವು ॥
ಅರಿಯದಲೆ ಮೃಗತೃಷ್ಣೆಗೊಳಗಾಗಿ ಸರ್ವರೂ ।
ಪರಿಪರಿಯ ಕಷ್ಟವನು ಪೊಂದುತಿಹರು ॥

೫೬

ಮಾಯೆಯೊಡಗೂಡಿ ತಮ್ಮನು ತಾವೆ ನಿಂದಿಪರು ।
ಹೇಯವಹ ಸಟೆನುಡಿಯನಾಶ್ರಯಿಪರು ॥
ಕಾಯವಿದು ದಿಟವೆಂದು ಕಾಮಾದಿವಶರಾಗಿ ।
ಬೇಯುವರಹಂಕಾರದಾವಾಗ್ನಿಯೊಳ್ ॥

೫೭

ರಾಗಿಗಳು ಭೋಗಿಗಳು ಯೋಗಿಗಳು ತ್ರಿಗುಣಮಯ ।
ರಾಗಿ ತತ್ವವನರಿಯದಲೆಯುತಿಹರು ॥
ಕೂಗುವರು ನಾವು ನಮ್ಮಿಂದಾದುದೆಂದವರು ।
ರೋಗರುಜೆಯನು ಪೊಂದಿ ಬಳಲುತಿಹರು ॥

೫೮

ತಿಳಿಯೆ ಸತ್ಯಾಸತ್ಯಮುಳಿಯುವುದೆ ನಿರ್ಗುಣವು ।
ಸುಳಿವುದದರೊಳು ಭೇದ ಮತ್ತಭೇದಂ ॥
ಹೊಳೆಯುವುದು ರಾಗವದರೊಳು ವಿರಾಗವು ಮತ್ತೆ ।
ಕಳೆಗೊಳ್ಳುವುದು ಕ್ರೋಧವಕ್ರೋಧವು ॥

೫೯

ದನಿಯದನು ತಿಳಿಸುವುದು ದನಿಯದರ ನಿಶ್ವಾಸ ।
ದನಿಯ ಕಾರ್ಯವದೊಂದು ಕೊಡದ ತೆರದಿ ॥
ಕೊನೆಗೆ ಕೊಡವೊಡೆದು ಮಣ್ಣೊಳು ಬೆರೆಯುವಂತೆ ದನಿ ।
ಘನವಪ್ಪ ಶಿವಲಿಂಗದಡಗುತಿಹುದು ॥

---

# ಯುಗಾದಿ

೧

ಇಂದು ಯುಗಾದಿಯು ಬಂದಿಹುದೆಲ್ಲರ ।
ಬಂಧುಗಳೊಡಗೂಡಿಸುವುದಕೆ ॥
ಅಂದದ ಚಂದದ ಕುಂದದ ಹೃದಯಾ ।
ನಂದವನಭಿವರ್ಧಿಸುವುದಕೆ ॥

೨

ಘಮಘಮಿಸುವ ತೈಲವ ತೊಡೆದಂಗವ ।
ವಿಮಲೋದಕದಿಂ ತೊಳೆವುದಕೆ ॥
ಅಮಮಾ ! ಬಡವನ ತಲೆಗೆಳ್ಳೆಣ್ಣೆಯ ।
ಬೆಮರಿನ ನೀರನು ಸುರಿವುದಕೆ ॥

೩

ಕೇಸರಿ ಬಾದಾಮಿಯ ಪುಡಿ ಬೆರೆಸಿದ ।
ಸೀಸಿಹಿ ಬೇವನು ತಿನಿಪುದಕೆ ॥
ಕಾಸಿರದೇಳು ದರಿದ್ರಗೆ ಬರಿ ಹೂ ।
ಸೂಸಲವನು ತಂದಿಡುವುದಕೆ ॥

೪

ಹೋಳಿಗೆ ಶಾವಿಗೆ ಸಂಡಿಗೆ ಮಂಡಿಗೆ ।
ಕೇಳಿದ ವಸ್ತುವ ಕೊಡುವುದಕೆ ॥
ಜೋಳದ ಹಿಟ್ಟನು ಬೆಲ್ಲದಿ ಬೆರಸಿದ ।
ಕೂಳನು ಬಡವರಿಗಿಡುವುದಕೆ ॥

೫

ಬಣ್ಣಿಸಲಸದಳಮಾದಡಿಗೆಯ ಬಿಡ ।
ದುಣ್ಣಿಸಲಾ ಸಿರಿವಂತರಿಗೆ ॥
ಬಣ್ಣದ ಬಲು ಬೆಲೆಯುಡುಪನು ತೊಡಿಸನು ।
ಕಣ್ಣಿಗೆ ತೋರಲು ಬಡವರಿಗೆ ॥

೬

ಸಿರಿವಂತರ ಸಿಂಗಾರದ ಸೊಬಗನು ।
ಧರೆಯೊಳು ನೆಲೆಯಾಗಿಡುವುದಕೆ ॥
ತರತರದಾಟವನಾಡಿಸಿ ಮನಸಿನ ।
ಕೊರತೆಯ ತರೆದೋಡಿಸುವುದಕೆ ॥

೭

ಮನೆಮಕ್ಕಳ ಮರೆಯದೆ ಕರೆದವರಿಗೆ ।
ಮನದಣಿಯುಣಲಿಕ್ಕಿಸುವುದಕೆ ॥
ನೆನೆದೊಡವೆಗಳನು ತೊಡಿಸುತ ಜರಿದಡಿ ।
ಮಡಿಗಳ ಬೆಳಕಿಗೆ ತರುವುದಕೆ ॥

೮

ಬಡವರ ಮಕ್ಕಳ ನಡುವಿಗೆ ಹಗ್ಗದ ।
ಗಡುತರ ಪಟ್ಟಿಯ ನಿಡಿಪುದಕೆ ॥
ಒಡವೆಯ ನೆವದಿಂದೊಡೆಯನು ಮಾಡಿಸಿ ।
ಬಿಡದೆಲ್ಲರಿಗುಣಬಡಿಪುದಕೆ ॥

೯

ಗಾನಾಮೃತವನು ಕುಡಿದಾಸನದಿಂ ।
ದಾನಂದಾಶ್ರುವ ತರುವುದಕೆ ॥
ದೀನ ದರಿದ್ರನ ಹೀನಾವಸ್ಥೆಯ ।
ನಾನನದಿಂ ಪೊರಗಿಡುವುದಕೆ ॥

೧೦

ಹರಹರ ಶಿವಶಿವ ಎನ್ನದ ನರರಿಗೆ ।
ಸಿರಿವಂತಿಕೆಯನು ಕೊಡುವುದಕೆ ॥
ಹರನನೆ ನೆನೆಯುವ ಗುರುಭಕ್ತರಿಗಾ ।
ವರ ದಾರಿದ್ರ್ಯವ ಕೊಡುವುದಕೆ ॥

೧೧

ಮತಿಹೀನಗೆ ಕುಮತಿಗೆ ಬಹುಮಾನವ ।
ಸತತವು ಬಿಡದಾಚರಿಪುದಕೆ ॥
ಮತಿವಂತಗೆ ವಿದ್ವಾಂಸಗೆ ಸಜ್ಜನ ।
ಗತಿಶಯುಮಪಮಾನಿಸುವುದಕೆ ॥

೧೨

ನರಕವಿಗಳ ಬೆಡಗಿನ ಶಬ್ದಗಳಿಂ ।
ಕರೆಯಿಸಿ ಬರೆಯಿಸಿ ಕೊಳುವುದಕೆ ॥
ವರಕವಿ ವಾಗೀಶನ ಬರಿಗೈಯ್ಯೊಳು ।
ಜರಿದಾದರು ಬರೆಗೊಳುವುದಕೆ ॥

---

## ಗೌರೀ ಸ್ತುತಿ

ದೇವಿ! ಕರುಣಾಕರೇ ॥ ಗೌರೀ ದೇವಿ! ಕರುಣಾಕರೇ ॥ ಪಲ್ಲ ॥
ಕರುಣಾಕರೇ! ವರದೇ! ಶಿವೇ ॥ ಅ. ಪ. ॥
ಜಗದಾದಿಮೂಲೇ । ನಿಗಮಾಂತಲೋಲೇ ॥
ನಗರಾಜಬಾಲೇ । ಸುಗುಣೇ ಸುಶೀಲೇ ॥
ಕುಂಭೋದ್ಭವಾದಿ ಮುನಿವಿನುತಪಾದೇ ।
ಅಂಬಾ ಭವಾನೀ ಪರಿಪಾಹಿ ಮಾತೇ ॥
ಶಿವಮಾನಸ ಸರಸೀ ವಿಹಾರಿ ।
ಕವಿವರ್ಯ ವಾಗೀಶ್ವರ ಸೌಖ್ಯಕಾರಿ ॥

---

# ಶಿವ ಸ್ತುತಿ

( ದಾಟ — ಸ್ವಾಮಿದೇವನೆ ಎಂಬಂತೆ )

೧

ನೀಲಕಂಠನೆ, ನಿಗಮಚರಿತನೆ, ।
ನಿತ್ಯ ನಿರ್ಮಲ ರೂಪನೆ ॥
ವ್ಯಾಲಮೂಲನೆ ಫಾಲನೇತ್ರನೆ ।
ಪಾಲಿಸೆಮ್ಮನು ಬೇಗನೆ ॥

೨

ಕಾಮವೈರಿಯೆ, ಸೋಮಧಾರಿಯೆ ।
ಸ್ವಾಮಿ ಶಂಕರ ಮೂರ್ತಿಯೆ ॥
ನೇಮದಿಂದಲಿ ನಿನ್ನ ಭಜಿಸುವೆ ।
ಪ್ರೇಮದಿಂದಲಿ ಪಾಲಿಸೈ ॥

೩

ಅರಳಮಲ್ಲಿಗೆ ಸರವು ಕೊರಳೊಳು ।
ಕರದಿ ರತ್ನದ ಕಂಕಣ ॥
ಶಿರದಿ ವಜ್ರದ ಮುಕುಟ ಧರಿಸಿದ ।
ಗಿರಿಜೆಯೊಡೆಯನೆ ಪಾಲಿಸೈ ॥

೪

ಕರದಿ ಶೂಲವ ಧರಿಸಿ ಕಾಲನ ।
ನಿರಿದು ಬಾಲನ ಪೊರೆದನೆ ॥
ಹರುಷದಿಂ ವಾಗೀಶ ಕವಿಯನು ।
ಪೊರೆದು ವರಗಳ ಪಾಲಿಸೈ ॥

———

# ಕರ್ನಾಟಕ ರಾಷ್ಟ್ರಗೀತೆ

ವಿಜಯಿಸಲಿ ವೀರರಿಂದೆಮ್ಮ ಕನ್ನಡ ನಾಡು ।
ಸುಜನಪಾಲರ ಬೀಡು, ನಿಜ ಧರ್ಮಗಳ ಗೂಡು ॥ ಪಲ್ಲ ॥

೧

ಸತ್ಯಯುಗದಾರಂಭದಿಂದ ನೆಲೆಸಿದ ನಾಡು ।
ಮತ್ತೆ ಮನ್ವಾದಿಗಳು ಬಣ್ಣಿಸಿದ ಸಿರಿನಾಡು ॥
ನಿತ್ಯದೊಳು ವಾಲ್ಮೀಕಿ ಕೃತಿಯೊಳೊಪ್ಪುವ ನಾಡು ।
ಚಿತ್ತಕಾನಂದಕರಮಾದ ವಾಲಿಯ ನಾಡು ॥

೨

ವೀರಾಧಿವೀರ ಮಾರುತಿಯು ಪೆತ್ತಿಹನಾಡು ।
ಶೂರರಧಿಪತಿ ರಾಮಕೀರ್ತಿಗಾದಿಯ ನಾಡು ॥
ವೀರಮಾತೆಯು ಜಾನಕಿಯು ಪೊರೆದ ಸಿರಿ ನಾಡು ।
ಕ್ರೂರ ರಾವಣನ ವಧೆಗಾದಿ ಕಾರಣ ನಾಡು ॥

೩

ಕುಂಭಸಂಭವ ಮುನಿಗೆ ಇಂಬಾದ ಮಲೆನಾಡು ।
ಶಂಭು ರೇಣುಕತತ್ತ್ವಸುಧೆಯುಂಡ ಸವಿನಾಡು ॥
ಅಂಬುನಿಧಿಯಾಚೆಯೂ ಶಕವ ಮೆರೆಸಿದ ನಾಡು ।
ಕುಂಭಿನಿಯೊಳೆಲ್ಲೆಡೆಯು ಪೆಸರಾಂತ ಎರೆನಾಡು ॥

೪

ಸತಿ ಕಲಾವತಿ ಮಾಲ್ಯಕೇತು ಭೂಪರ ನಾಡು ।
ಮತಿವಂತ ವ್ಯಾಸಮುನಿ ಪೊಗಳ್ದ ಪೊನ್ನಿನ ನಾಡು ॥
ಕ್ಷಿತಿಪತಿ ವಿರಾಟನಾಳಿರುವ ತಂಪಿನ ನಾಡು ।
ಹತಭಾಗ್ಯ ಪಾಂಡವರನಜ್ಞಾತಿಸಿದ ನಾಡು ॥

೫

ಶಿವರೂಪಿ ಮಾರ್ಕಂಡಮುನಿ ವಾಸಿಸಿದ ನಾಡು ।
ಕವಿಕುಲಾಧಿಪ ಕಾಳಿದಾಸ ಬಾಳಿದ ನಾಡು ॥
ಅವನಿಪತಿ ಭೋಜನಾಳಿರುವ ಧಾರೆಯ ನಾಡು ।
ಭವಿತನವ ಬಡಿದೋಡಿಸಿರುವ ಪುಣ್ಯದ ನಾಡು ॥

೬

ಬುದ್ಧದೇವನ ಪ್ರಾಣಿದಯೆಗೆ ಮೆಚ್ಚಿದ ನಾಡು ।
ಸಿದ್ಧರೇವಣ ಶಿವಾದ್ವೈತದೊಳಗಿಹ ನಾಡು ॥
ಅದ್ವೈತದೊಳು ಮೆರೆದ ಶಂಕರನ ನೆಲೆನಾಡು ।
ಮಧ್ವರಾಮಾನುಜಾದಿಗಳು ಚರಿಸಿದ ನಾಡು ॥

೭

ಶಾಲಿವಾಹನ ನೃಪನಿಗಾದಿ ಜನ್ಮದ ನಾಡು ।
ಶಾಲಿಗಳ ಬೆಳೆಯಿಂದ ಮೆರೆವ ಕೆಸರಿನ ನಾಡು ॥
ಬಾಳೆ ಮೊದಲಾದ ಫಲತರುಗಳಿಹ ಕೆರೆನಾಡು ।
ಜೋಳಗಳ ಬೆಳೆಗೆ ಪ್ರಾಮುಖ್ಯವಾಗಿಹ ನಾಡು॥

೮

ಪುಲಕೇಶಿ ಚಾಲುಕ್ಯ ನೃಪತುಂಗರೊಡೆನಾಡು ।
ಮಲಖೇಡ ಕಲ್ಯಾಣ ವಿಜಯಪುರಗಳ ನಾಡು ॥
ಇಳೆಯೊಳೆಲ್ಲೆಡೆಯು ಪೆಸರಾಂತ ಬನವಸೆ ನಾಡು ।
ಹಳೆಬೀಡು ಬಾದಾಮಿ ಹಂಪೆಗಳ ನಡುನಾಡು ॥

೯

ಮಲ್ಲರಸ ಕೆರೆಯಪದುಮರು ಜನ್ಮಿಸಿದ ನಾಡು ।
ಮಲ್ಲಿಕಾರ್ಜುನ ಭಕ್ತ ಸಿದ್ಧರಾಮನ ನಾಡು ॥
ಎಲ್ಲರನು ಸಮಗಂಡು ಮೆರೆದ ಬಸವನ ನಾಡು ।
ಅಲ್ಲಮಾದಿಗಳಿಂದ ಬೆಳೆದೆಮ್ಮ ನುಡಿನಾಡು ॥

೧೦

ಸೀಮೆಯೊಳು ಹೆಸರಾದ ಶಾಳಿಂಗನಾ ನಾಡು ।
ಸ್ವಾಮಿ ವಿದ್ಯಾರಣ್ಯ ವಿಜಯನಗರದ ನಾಡು ॥
ಸಾಮ್ರಾಜ್ಯವಾಳಿದಾ ಹುಕ್ಕ ಬುಕ್ಕರ ನಾಡು ।
ಹೇಮನಾಣ್ಯದ ಕೆಳದಿ ಇಕ್ಕೇರಿಗಳ ನಾಡು ॥

೧೧

ವೀರ ಘನವೀರರಾಳಿದ ಕೊಡಗಿನಾ ನಾಡು ।
ನಾರಿಯಕ್ಕವಮ್ಮ ಮೈರಾಳಿಯರ ಕಳೆ ನಾಡು ॥
ಸಾರಕಾವ್ಯವ ಬರೆದ ಹೊನ್ನಮ್ಮನೆಳೆನಾಡು ।
ವೀರ ಮಲ್ಲಮ್ಮ ಚನ್ನಮ್ಮಾಜಿಯರ ನಾಡು ॥

೧೨

ಮಾನ್ಯ ಕವಿ ಪಂಪ ನಿಜಗುಣರು ಮೆರೆಸಿದ ನಾಡು ।
ರನ್ನ ಹರಿಹರ ಷಡಕ್ಷರರ ಹರುಷದ ನಾಡು ॥
ಪೊನ್ನ ಲಕ್ಷ್ಮೀಶ ನಯಸೇನರುಬ್ಬಿನ ನಾಡು ।
ಉನ್ನತೋನ್ನತ ಕಾವ್ಯಗಳ ಬರೆಸಿದೀ ನಾಡು ॥

೧೩

ಕೆರೆಕಟ್ಟೆ ಹೊಳೆಹಳ್ಳ ತುಂಬಿ ತುಳುಕುವ ನಾಡು ।
ತರುಲತೆಗಳಿಂದ ಶೃಂಗಾರವಾಗಿಹ ನಾಡು ॥
ಸಿರಿವಂತರಾನಂದದುದ್ಯಾನಗಳ ನಾಡು ।
ಗಿರಿಕರಿಗಳಿಂ ಮೆರೆವ ಚಲುವ ಕಾಡಿನ ನಾಡು ॥

೧೪

ದಿಕ್ಕು ದಿಕ್ಕಿಗೆ ಸಿಕ್ಕು ಸುಕ್ಕಾದ ಒಡೆನಾಡು ।
ಜಕ್ಕಣಾಚಾರ್ಯರಿಂದಂದವಾಗಿಹ ನಾಡು ॥
ಲೆಕ್ಕವಿಲ್ಲದ ದಾಳಿಗಳ ತಿಂದ ಗಡಿನಾಡು ।
ಒಕ್ಕಲಿಗರಿಂದಲೇ ಉನ್ನತಿಸಿದೀನಾಡು ॥

೧೫

ಒಂದುಕಡೆ ತೆಲುಗ ಸೋಷರರ ಪೊರೆಯುವ ನಾಡು ।
ಒಂದುಕಡೆ ಮಾರಾಟರೊಷನೆ ಬೆರೆದಿಹ ನಾಡು ॥
ಒಂದುಕಡೆ ಯವನರೊಂಡಾಗಿ ಬಾಳುವ ನಾಡು ।
ಒಂದುಕಡೆ ತಮಿಳ ತಾಯಿಗೆ ಬಾಗಿದೀ ನಾಡು ॥

೧೬

ಕನ್ನಡದ ನುಡಿಯು ಕೋಮಲ ಲತೆಯ ಬೆಳೆನಾಡು ।
ಕನ್ನಡದ ಭಾಗ್ಯನಿಧಿ ಚಾಮುಂಡಿಯಾ ನಾಡು ॥
ಕನ್ನಡದ ಪೀಠವಾ ಕೃಷ್ಣಭೂಪನ ನಾಡು ॥
ಕನ್ನಡಿಗರುನ್ನತಿಯ ಮೈಸೂರ ವರನಾಡು ॥

೧೭

ವೀರಶೈವರ ನಾಡು, ಸ್ಮಾರ್ತ–ಮಾಧ್ವರ ನಾಡು ।
ವೀರವೈಷ್ಣವ - ಶಾಕ್ತ - ಬುದ್ಧ - ಜೈನರ ನಾಡು ॥
ಬೀರದೇವರ ನೆನೆವ ಹಾಲುಮತಿಕರ ನಾಡು ।
ಶೂರ ವಾಲ್ಮೀಕಿ ಮೊದಲಾದ ಮತಗಳ ನಾಡು ॥

೧೮

ಮೇಟಿ ಬಾಣವ ಪಿಡಿದು ಜಯುವ ಕೋರುವ ನಾಡು ।
ರಾಟಧನುವನು ಪೂಡಿ ವಿಜಯಪೊಂದಿದ ನಾಡು ॥
ನೀಟಾಗಿ ಕಾದೆ ಖಾದಿಯ ಧರಿಸುತಿಹ ನಾಡು ।
ಕೋಟಿಜನ ಕೂಡಿ ಸತ್ಯಾಗ್ರಹದೊಳಿಹ ನಾಡು ॥

೧೯

ಮದನಮೋಹನ ಮಾಲವಿಯು ಬಣ್ಣಿಸಿದ ನಾಡು ।
ಚದುರ ಪಂಡಿತ ಜವಾಹಿರಲಾಲರಡಿ ನಾಡು ॥
ಮುದುಕ ಮಾಹಾತ್ಮ ಗಾಂಧಿಯು ಬದುಕಿಸಿದ ನಾಡು ।
ಎದೆದಟ್ಟ ಮೆರೆವ ಕಾಂಗ್ರೆಸ್ಸಿನೊಳಗಿಹ ನಾಡು ।

೨೦

ಪಾದರಿ ಮುಸಲ್ಮಾನರಾಶ್ರಯಿಸಿದೀ ನಾಡು ।
ಕ್ರೋಧವಿಲ್ಲದ ಮಾರವಾಡಿ ಗುಜ್ಜರ ನಾಡು ॥
ಸೋದರರ ಭಾವನೆಯ ಬೆಳಸು ಬೆಳವಲ ನಾಡು ।
ಭೇದವಿಲ್ಲದೆ ಪರರನೊಳಗೆ ಕರೆದಿಹ ನಾಡು ॥

ನರವೀರ ಧನಶೆಟ್ಟಿ ಮಲ್ಲಣ್ಣನಾ ನಾಡು ।
ಗುರು - ವಿರಕ್ತರು ಚರಿಸುತುದ್ಧರಿಸುವೀ ನಾಡು ॥
ಹರಿಜನರ ಹರಜನರ ಶಿರದಿ ಧರಿಸಿಹ ನಾಡು ।
ವರಕವಿಯು ವಾಗೀಶ ನೆನೆವ ತಾಯಿಯ ನಾಡು ॥

---

## ಕೇಳುವವರಾರು ?

ಧರೆಯು ಬೀಜವ ನುಂಗೆ ಕೇಳುವವರಾರು ?
ಬೇಲಿ ಹೊಲವನು ಮೆಯ್ಯೆ ಕೇಳುವವರಾರು ?
ತಾಯಿ ತನ್ನಯ ಶಿಸುವ ಕೊಲ್ಲೆ ಕೇಳುವವರಾರು ?
ಅರಸು ತನ್ನಯ ನಾಡ ಸುಡಿಸೆ ಕೇಳುವವರಾರು ?
ಧರೆಯೆಲ್ಲ ತವರೂಪವಾಗಿರಲು ನೀನಿದನು ।
ಪೊರೆಯದಿರಲಿನ್ನಾರು ಇಪರೊ ಮಲ್ಲೇಶಾ ?

---

## ಸತ್ಯಮೇವಜಯತೇ

ಸತ್ಯಮೇವ ಜಯತೇ ನಾನೃತಂ । ಸತ್ಯಮೇವ ಜಯತೇ ॥ ಪಲ್ಲ ॥
ಸತ್ಯಮೇವ ಜಯತೇ ಭುವನೇಸಿಶಂ । ಚಿತ್ತಶುದ್ಧಿಪೂರ್ವಕಂ
ಬ್ರವೀಮಿ ॥ ಅ. ಪ. ॥
ರಾಮಚಂದ್ರ ಧರ್ಮಾದಿ ನೃಪಾಲಕ ಪಾಲಿತಮೇತತ್ಖಲು ಸತ್ಯಂ ।
ಸೋಮ ಸೂರ್ಯ ವರುಣಾಗ್ನಿಯಮಾದಿಭಿರಾಶ್ರಿತಮೇತತ್ಖಲುಸತ್ಯಂ॥
ಕಾಮವೈರಿ ಕರುಣಾರಸಪೂರಿತ ಭೂಮಿರಕ್ಷಕಂ ಖಲು ಸತ್ಯಂ ॥
ತಾಮಸ ಮಾನಸ ಚೋದಿತ ಷಡ್ರಿಪು ಪಾಪಹಾರಕಂ ಖಲು ಸತ್ಯಂ ॥

---

ಕರ್ನಾಟಕ ರತ್ನಸಿಂಹಾಸನಾಧೀಶ್ವರ

## ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರವರ

ಜಜನೇ ವರ್ಧಂತ್ಯುತ್ಸವ ಸಮಾರಂಭದಲ್ಲಿ ಮೈಸೂರು
ರಾಜಧಾನಿಯಲ್ಲಿ ರಚಿಸಿದ

# ವರ್ಧಂತೀ ನವರತ್ನಮಾಲೆ

೧

ಯದುವಂಶೋದ್ಭವ ನೃಪಮಣಿ ।
ಬುಧಜನ ಸಂಗೀತ ಚರಿತನಿದೊ! ಮೆರೆವನಹೋ !!
ಉದಿಸಿರಲೈವತ್ತೈದನೆ ।
ಯದು ಶುಭವರ್ಧಂತಿ ದಿಹಮಿದಾನಂದಕರಂ ॥

೨

ದಯೆಯೇ ಧರ್ಮದ ಮೂಲವು ।
ಭಯವಿಲ್ಲದೆ ಬಾಳುತಿರ್ಪುದದು ಧರ್ಮಫಲಂ ॥
ಜಯಮಾಧರ್ಮದೆ ಸಿದ್ಧಿಪು ।
ದಯಿಭೋ! ಕೃಷ್ಣೇಂದ್ರ!! ಧರ್ಮಮೂರ್ತಿಯು ನೀನೈ ॥

೩

ಮಿತವಚನಂ, ಹಿತವಚನಂ ।
ಕ್ಷಿತಿಪತಿ ಕೃಷ್ಣೇಂದ್ರ! ತತ್ತ್ವವಿದ್ಯಾಭರಣಾ !!
ಮತಿವಂತಾಗ್ರೇಸರ! ನೀಂ ।
ಸುತಸಮವೀ ಪ್ರಜೆಯ ಪಾಲಿಸುತ್ತಿಹೆಯನಿಶಂ ॥

೪

ಶಿವನಂದದೆ ಸಂಸಾರಿಯು ।
ಶಿವನಂದದೆ ಭಾವಿಸಲ್ಕೆ ವೈರಾಗ್ಯಯುತಂ ॥
ಅವನಿಪ ಜನಕಾದಿಗಳಿಗೆ ।
ಸವನಾಗಿಹೆ ಕೃಷ್ಣರಾಜ! ರಾಜರ್ಷಿಯು ನೀಂ ॥

೫

ಕನ್ನಡ ನಾಡಿನ ವೃದ್ಧಿಗೆ ।
ಕನ್ನಡ ನುಡಿಯೆಲ್ಲ ಕಡೆಗು ಪಸರಿಸುವುದಕ್ಕಂ ॥
ಕನ್ನಡದೇಕೀಕರಣಕೆ ।
ನಿನ್ನರಸೊತ್ತುಗೆಯೆ ಮೂಲ ಕೃಷ್ಣನೃಪಾಲಾ ॥

೬

ಚಿಂತಾಮಣಿಸಮ ರಾಜ್ಯವ ।
ನೆಂತ್ಕೆ ಪಳಿಯುವುದು? ಪಳಿದು ಬಾಳುವುದೆಂತ್ಕೆ?
ಸಂತೋಷವ ಪೊಂದಿರ್ದರ ।
ಸಂತೋಷವ ತೋರ್ಪ ಜನಕೆ ಶಾಂತಿಯು ನೀನ್ಕೆ ॥

೭

ಕನ್ನಡ ನಾಡಿನ ಭಾಗ್ಯಂ ।
ನಿನ್ನಡಿಯೊಳು ರೇಖೆಯಾಗಿ ರಾರಾಜಿಪುದ್ಕೆ ॥
ಸನ್ನುತ ಕೃಷ್ಣೇಂದ್ರನೆ! ನೀ ।
ನುನ್ನತಿಸಿರೆ ಕನ್ನಡಮ್ಮನುನ್ನತಿಸಿರುವಳ್ ॥

೮

ಅಭಯುವ ದಯಪಾಲಿಸಿ ಶಿವ ।
ನಭಿನವ ವರ್ಧಂತಿಶತವನೀಯುತಿರಲ್ ನೀಂ ॥
ಅಭಿವರ್ಧಿಸುತಿರು ಯದುಕುಲ ।
ಶುಭಕರ! ಜಯಚಾಮರಾಜ ಸಂತತಿಸಹಿತಂ ॥

೯

ಈ ಕರ್ನಾಟಕ ರಾಜ್ಯಂ ।
ಶ್ರೀಕಂಠನ ದಯದೆ ಬೆಳೆಯಲಾಚಂದ್ರಾರ್ಕಂ ॥
ಭೂಕಾಂತಂ ಶ್ರೀಕೃಷ್ಣಂ ।
ಶಾಕೇಂದುವಿನಂತೆ ಬೆಳಗಲೀಶನ ಕೃಪೆಯಿಂ ॥

———

# ಸು ಜ್ಞಾ ನ

೧

ಬಾ! ಬೀರು, ಕರ್ಮಾನುಸಾರಿ ನೀ ಸುಜ್ಞಾನ ।
ನಾಭೀರು, ಎಂಬುದರ ಚಿಂತೆಯೇಕೆ?
ಆ ಭಾರಿ ಕರಿಮೋಡ, ಸುರಿವಾಗ ಹಿರಿಕಿರಿಯ ।
ಭೂಭಾರಗಳ ಗಣನೆ ಮಾಡುತಿಹುದೆ?

೨

ಮರೆಯೊಳೋ, ಕೆರೆಯೊಳೋ, ಗಿರಿಯೊಳೋ ಅಡಗಿರ್ದ ।
ಪರಿಯನಾ ರವಿಯರಿದು ಮೂಡುತಿಹನೆ?
ಹರಿದೋಡುತಿಹುದೆಂತು ಕಗ್ಗತ್ತಲೆಯು ಜವದೆ ?
ಅರಿದು ನೀನಿದನು ಸರುಪರೊಳುದಿಸು ॥

೩

ನಿನ್ನ ರೂಪವ ಕಾಣಬಯಸಿಯೂ ಕಾಣದವ ।
ರುನ್ನತೋನ್ನತನೆಂದು ಪೊಗಳಿರುವರೇ?
ಸುಣ್ಣ ಮನೆ ಕೊಳೆಯ ಕಳೆವುದು, ಕಳೆಯ ತರುವುದೆನೆ ।
ಬಣ್ಣವಿದು ನಿನಗೆ ಸರಿ, ಎಂದಿರುವರೆ?

೪

ಮನವೆ ಮಂದಿರವಾಗಲೆನಿತು ನೀನದರೊಳಿಹೆ?
ಘನದೋಷ ಭಿತ್ತಿಗಳು ಸುತ್ತಿರುವವು ।
ಅನುದಿನದಿ ತೊಳೆತೊಳೆದು ಸಿಂಗರಿಸಿ ಬೇಸತ್ತೆ ।
ಮಿನುಗು ನೀನೊಮ್ಮೆ ಎಂತಹುದೊ ಕಾಂಬೆ ॥

೫

ಗಾಳಿಯನೆ ಕೂಳನಾಗಿಸಿಕೊಂಡು ತಪಿಸಿದರು, ।
ಬಾಳಲೋಚನನ ಭಜಿಸಿದರು ಬಿಡದೆ,
ಹೇಳಿದರು ಕೇಳಿದರು ಶಾಸ್ತ್ರದೊಳಗಣ ಕೀಲು ।
ಮೇಳಿಲ್ಲ ನೀನೋರ್ವನಿಲ್ಲದಿರಲು ॥

ಇವರು ಸಂಸಾರಿಗಳು ಇವರು ಯೋಗಿಗಳೆಂಬ ।
ಕುವಿಚಾರ ನಿನಗಿಲ್ಲ ಪರಿಭಾವಿಸೆ,
ಅವರವರ ಕರ್ಮಪಾಕವನರಿದು ನೀನುದಿಸು ।
ವವಧಿಯನು ವಾಗೀಶಗಾಗಿ ಸವೆಸು ॥

---

## ಅ ನ್ನ ದಾ ನ

ದಾನ । ಅನ್ನದಾನ । ನಿದಾನ ॥ ಪಲ್ಲವಿ ॥
ಚರಾಚರ ಶಾಂತಿಕರ । ವಿಶ್ವ ಜೀವನಾಧಾರ ॥ ಅ. ಪ. ॥
ಹರಹರಿ ವಿಧಿ ದೇವ ಶಾಂತಿ ।
ನರಕೃತ ಘನಪಾಪ ಶಾಂತಿ ॥
ಗುರುಗಣ ಮುನಿವೃಂದ ಶಾಂತಿ ।
ಪರತರ ಪರಮಾತ್ಮ ಶಾಂತಿ ॥

---

## ಜ ಂ ಗ ಮ

ಜಂಗಮ ಜಗದಾಧಾರ । ಆಧಾರ ॥ ಪ ॥
ಆದಿಶಿವರೂಪವೇ । ಅನಾದಿಯಾಗಿ ಬಂದಿಹುದೈ ತಾಯೆ ।
ಭೇದವಿಲ್ಲವಮ್ಮಾ । ಕೇಳೈ, ಮೇದಿನಿಯೊಳು ಶಿವನೇ ಅವನು ॥

---

# ಶ್ರೀ ಪಂಚಾಚಾರ್ಯ ಸ್ತುತಿ

೧

ಶಿವಮತವನಾದಿಯೊಳು ಭುವಿಯೊಳಗೆ ನೆಲೆಗೊಳಿಸಿ ।
ಭವಿಗಳೆಲ್ಲರನು ಭವಜಾಡ್ಯದಿಂದುದ್ಧರಿಸಿ ॥
ಶಿವನೋರ್ವನೇ ದೇವನೆಂದುಃ ಸಿದ್ಧಾಂತಿಸಿ ಶಿವಾಗಮಾಚಾರಗಳನು ॥
ಅವನಿವಿಖ್ಯಾತ ಕುಂಭಜ ಮುಖ್ಯ ಮುನಿವರ್ಯ ।
ನಿವಹಕ್ಕೆ ಬೋಧಿಸಿ ಜಗದ್ಗುರುಗಳೆನಿಸಿ ಮೆರೆ ।
ದವರೆಮ್ಮ ಪಾಲಿಸಲಿ ರೇಣುಕಾದಿ ಪ್ರಥಮ ಪ್ರಮಥ ಪಂಚಾಚಾರ್ಯರು ॥

———

# ಶ್ರೀ ವೀರಭದ್ರ ಸು ತಿ

೧

ಹರನ ಮಾನಸಕುವರ, ದುರಿತೌಘಸಂಹಾರ ।
ಶರಣಜನಮಂದಾರ, ಭಕ್ತಪಾಲನ ಚತುರ ।
ವರವೀರಶೈವಸಮಯೋದ್ಧಾರಕಾದ್ಯ, ಗಣವರ, ವೀರಭದ್ರ, ರುದ್ರಾ ॥
ಸುರರಾಜ ದಕ್ಷಯಜ್ಞಧ್ವಂಸಕರ, ಖಡ್ಗ ।
ಧರ, ಭದ್ರಕಾಳಿಕಾವರ, ಮಹಾಶೂರ, ಪೊರೆ ।
ಗುರುವರಾ! ಸುರನರಮುನೀಂದ್ರವಂದಿತಚರಣ,
ಕರುಣಾರಸಾಮೃತಧರಾ ॥

———

# ವಸಂತ

೧

ಸಂತಸನೋ? ನೀನೇ ವಸಂತಸನೋ? ಚಳಿಗಾಲ
ದಂತಸನೋ? ಕಾಮುಕರ ಕಾಂತ! ಪೇಳು !!
ಸಂತೋಷವನು ನೀನು ಕೊಡುವಿಯೋ? ಭೋಗಿಗಳ
ಚಿಂತೆಯನು ಬಲಗೊಳಿಸಿ ತಿರುಗಿಸುವಿಯೋ?

೨

ನಿನ್ನ ದಾರಿಯ ಕಾದ ಗಿಡಬಳ್ಳಿ ಹಳೆತನವ
ನನ್ಯಾಯವಾಗಿ ಕಳಕೊಂಡಿರುವುದೇ?
ಚನ್ನಾಯಿತಯ್ಯ! ನಿನ್ನಾಶ್ರಯವ ಪೊಂದಿದವ
ರನ್ಯರೂಪವ ತಾಳಬೇಕಾಯಿತೆ?

೩

ಹಳೆತನವ ಕಳೆಯುವುದು ನಿನ್ನ ಕೈಯೊಳಗುಂಟೆ?
ಬಳಿಕೊಮ್ಮೆ ಹೊಸದು ಹಳೆಯದೆ ಆಗದೇ?
ಹಳೆಯದೇ ಹೊಸದಾಗಿ ಹೊಸದು ಹಳೆಯಾಗುವುದು।
ಇಳೆಯೊಳಿದನರಿದರಿದು ಬಡಿದಾಟವೆ?

೪

ಚಿಗುರೆಲೆಯು ನಗುತಿರಲು ಹಣ್ಣೆಲೆಯು ಉದುರವುದು।
ಚಿಗುರೆಲೆಗೆ ಹಣ್ಣೆಲೆಯೆ ಮೂಲವಲ್ತೇ?
ಜಗದ ಹೊಸತನಕೆಲ್ಲ ಹಳೆತನವೆ ಮೂಲವೈ।
ನಗುವರೇಕಯ್ಯ ಹಳೆತನಕೆ ಜನರು?

೫

ತಂದೆಯಲ್ಲವೆ ಕಂದನುದಯಕಾದಿಯು ಪೇಳು?
ಕಂದನೂ ಮುಂದೊಮ್ಮೆ ತಂದೆಯಹನೈ!
ಹಿಂದಿನದೆ ಹೊಸದಾಗಿ ಇಂದಿನದೆ ಹಳೆಯಾಗಿ
ಮುಂದರಿಯೆ ಮಧುಮಾಸ! ನಿನ್ನುದಯವೋ?

೬

ಕೋಗಿಲೆಯ ಕಂಠ ನಿನ್ನಾಗಮದೆ ಬಂದಿಹುದೆ ?
ರಾಗಿಯನುರಾಗವೂ ಮಿಗೆ ಬೆಳೆವುದೇ ?
ಭೋಗಿಭೂಷಣನು ವೈರಾಗಿಯಾಗಿಹನೇಕೆ ?
ಬೇಗನೇ ವಾಗೀಶಗರುಹು ನೀನೇ ।

---

## ಒಂದೇ ಧರ್ಮ

ಒಂದೇ ಧರ್ಮ, ಮೂಲೋಕದೊಳಿಹುದೊಂದೇ ಧರ್ಮ ॥ಪಲ್ಲ॥

೧

ನಾರಿಯು ಪತಿವ್ರತೆಯಾಗಿರೆ ಧರ್ಮ ।
ನರನೊ ಸತಿವ್ರತನಾಗಿರೆ ಧರ್ಮ ॥

೨

ಪರಪತಿ ಪರಸತಿಗಳುಕಿದಾಕ್ಷಣವೆ ।
ನರಕವಾಸವೆಂಬುವುದೆ ಅಧರ್ಮ ॥

---

## ಫಲವಿಲ್ಲ

೧

ಭಕ್ತಿ ಇಲ್ಲದೆ ಪೂಜೆ ಮಾಡಿದರೆ ಫಲವಿಲ್ಲ ।
ಶಕ್ತಿಯಿಲ್ಲದೆ ವ್ಯಾಜ್ಯವಾಡಿದರೆ ಫಲವಿಲ್ಲ ॥

೨

ಯುಕ್ತಿಯಿಲ್ಲದ ಜಾಣತನದಿಂದ ಫಲವಿಲ್ಲ ।
ರಕ್ತಿಯಿಲ್ಲದ ಸಂಸಾರದಿಂ ಫಲವಿಲ್ಲ ॥

೩

ವಿರಕ್ತಿಯಿಲ್ಲದ ಕಪಟವೇಷದಿಂ ಫಲವಿಲ್ಲ ।
ಮುಕ್ತಿಪತಿ ಮಲ್ಲಯ್ಯ ನೊಲಿಯದಿರೆ ಫಲವಿಲ್ಲ ॥

# ಸೊಂಡೂರು ಶ್ರೀ ಕುಮಾರಸ್ವಾಮಿ

೧

ಏ! ಕುಮಾರಸ್ವಾಮಿ! ಕೈಲಾಸದೊಳಗಿರದೆ।
ಏಕೆ ನೀನಿಲ್ಲಿ ನೆಲೆಸಿರುವೆ ಕಾಣೆ ॥
ನಾಕಸೇನಾಪತಿಯು ನೀನಲ್ಲವೇ? ಅಲ್ಲಿ।
ಬೇಕಾದ ವಸ್ತುಗಳು ಸಿಗಲಿಲ್ಲವೆ?

೨

ಹರಗೌರಿಯರೆ ನಿನ್ನ ತಂದೆ ತಾಯಿಗಳಲ್ತೆ?
ಸುರರಾಜ ನಿನ್ನಡಿಯ ದಾಸನಲ್ತೆ?
ತೊರೆದಿವರ ನರಲೋಕಕಾಗಮಿಸಿ ಈ ಗಿರಿಯ।
ಶಿರದೊಳೇಕಯ್ಯ! ನೀ ಮೆರೆಯುತಿರುವೆ?

೩

ಸುರಗಿ ಸಂಪಿಗೆ ಹೊನ್ನೆ ಬೆಟ್ಟದಾವರೆ ಹೂಗ।
ಳಿರಲಿಲ್ಲವೇನಲ್ಲಿ ನೀನು ಮುಡಿಯೆ? ॥
ಗಿರಿಜೆ ಜಗದಮ್ಮ ಗಿರಿಮಲ್ಲಿಗೆಯ ತನಗಾಗಿ।
ತರಲು ಕಳುಹಿದಳೇನು ಕಂದ! ನಿನ್ನ?

೪

ಮಂಜುಬೆಟ್ಟದೊಳುಂಟೆ ಪಾರಿಜಾತದ ಮರವು?
ನಂಜುಂಡನಾವಾಸ ಬೆಳ್ಳಿಬೆಟ್ಟ!
ರಂಜಿಸಿರಲಲ್ಲಿ ಸಿರಿಗಂಧ, ಶಿವನಾ ಬೂದಿ।
ಗಂಜುತಿರಲಿಲ್ಲವೇ ಬಳಿಯುವುದಕೆ?

೫

ಯಾರು ಕಂಡರು ಸ್ವಾಮಿ! ನಿಮ್ಮ ಕೈಲಾಸವನು।
ನೀರನ್ನವಲ್ಲಿ ಮೊದಲಿಲ್ಲವಂತೆ!
ಘೋರತಪವೆಸಗಿ ಬಂದವಗಮೃತವಲ್ಲದಲೆ।
ಬೇರಾವ ವಸ್ತುವೂ ದೊರೆಯದಂತೆ!

೬

ಇಂತಾಗಿ ದೇವ ! ನೀನಾವಕತದಿಂದಿಲ್ಲಿ ।
ಸಂತೋಷಪೊಂದುವುದಕಾಗಿ ಬಂದೆ ?
ಕಂತುಹರಕುವರ ! ಪೇಳೀಗ ಸಂತೈಸು ! ನಾ
ಚಿಂತೆಗೊಳಗಾಗಿರುವೆನೇನರಿಯದೆ ॥

೭

ನೀನಿದ್ದ ಕಡೆಯಲ್ಲೆ ನಿನ್ನಾಗಮವ ಬಲ್ಲ ।
ಜ್ಞಾನಿ ಕುಂಭಜನಿಹನೊ ತಿಳಿಯದಿಹುದು ॥
ಮಾನವರು ಮೊದಲವನ ತೀರ್ಥದೊಳಗಾಚಮಿಸಿ ।
ಯಾನಂತರವೆ ನಿನ್ನ ಕಾಂಬರೇಕೆ ?

೮

ಏನು ನಿನ್ನಯ ದಿವ್ಯಮೂರ್ತಿ ತಲೆಯೊಳು ಲಿಂಗ !
ಭಾನುಪ್ರಕಾಶವೆಡಬಲ ಕಾಲ್ಗಳ ॥
ಸಾನುರಾಗದೆ ತಬ್ಬಿಕೊಂಡ ವೀರರದಾರು ?
ಏನು ಕಾರಣ ನಿನ್ನ ಬೇಡುತಿಹರು ?

೯

ವೀರಶೈವರ ಗೋತ್ರ ಪುರುಷ ನೀನಲ್ಲವೇ ?
ನಾರಿಯರಿಗೇಕೆ ನೀ ಕಾಣದಿರುವೆ ?
ಕಾರುವರೆ ನೆತ್ತರವ ವೀರ ! ಇದು ನಿಶ್ಚಯವೆ ?
ಭೂರಿ ಮಹಿಮನೆ ! ಭಕ್ತರೊಳು ಭೇದವೇ ?

೧೦

ದೇವಲೋಕವ ಬಿಟ್ಟು ನೀನಿಲ್ಲಿ ಬಂದಿರಲು ।
ದೇವರೊಡೆಯೊಡತಿಯರು ಅಲ್ಲಿರುವರೇ ?
ದೇವಿ ಪಾರ್ವತಿ ನಿನ್ನ ಬಲಗಡೆಯ ಗಡಿಯೊಳಿರೆ ।
ದೇವ ನಿನ್ನೆಡಗಡೆಯ ಗುಡಿಯೊಳಿಹನು !

೧೧

ಅಮ್ಮ! ಪಾರ್ವತಿ !! ಎಮ್ಮ ಹಡೆದಮ್ಮ! ಮೇಗೈಯ್ಯೊ
ಳಮ್ಮ! ಬಲಗಡೆ ಏನು? ಲಿಂಗವೇನು?
ನೆಮ್ಮದಿಯು ಮನಕಾಯ್ತು ನೀನು ಧರಿಸಿಹ ಲಿಂಗ।
ನಿಮ್ಮ ಪತಿ ನಮ್ಮ ಪಿತ ಶಿವ ಕೊಟ್ಟುದೊ?

೧೨

ಗವಿಗಳೋ ಗುಹೆಗಳೋ ಕಂದರಗಳೋ ಬಹಳ!
ಶಿವಯೋಗಿಗಳು ಮೊದಲು ಇರುತಿರ್ದರೋ?
ಶಿವಶಿವಾ! ಈಗವರು ಮನೆಮಠಗಳನು ಸೇರಿ।
ಗವಿಗಳಿವುಗಳನು ಹುಲಿಗಳಿಗಿತ್ತರೋ?

೧೩

ಏನು ಕಾಡಿದು! ದೊಡ್ಡ ದೊಡ್ಡ ಮರಗಳು ಬೆಳೆದು।
ನಾನಾ ವೃಗಂಗಳಿಗೆ ಎಡೆಯಾಗಿದೆ!
ಸಾನುಪ್ರದೇಶ ಬೆಳೆಬೆಳೆದು ತೆಗ್ಗುಬ್ಬುಗಳ।
ನೇನರಿಯದಂತೆ ಸಮನಾಗಿಸುತಿದೆ!

೧೪

ಬೆಟ್ಟಗಳ ಮೇಲೆ ಬೆಟ್ಟಗಳಡರಿ ದಾರಿಗರ।
ದಿಟ್ಟಿಯನು ಗರ್ರನೇ ತಿರುಗಿಸುತಿದೆ!
ಬಟ್ಟೆಯೊಳು ನಡೆವಾಗ ನಡುವೆಯೇ ಎತ್ತುಗಳ।
ಹೊಟ್ಟೆಯನು ಹೀಚಿ ಹಣ್ಣಾಗಿಸುತಿದೆ!

೧೫

ಬಲುಬಗೆಯ ಗಿಡಬಳ್ಳಿ ಬೆಳೆದು ವೈದ್ಯರನಿಲ್ಲಿ।
ನಿಲುವುದಕೆ ಬನ್ನಿರೆಂದಾಶಿಸುತಿದೆ॥
ಮಲಿನ ಮನವಳಿದ ಮುನಿಗಳೆ! ತಪವನಾಚರಿಸ।
ಲನುಮಾನಿಸದೆ ಬನ್ನಿರೈ! ಎನ:ತಿದೆ!

೧೬

ನವಿಲುಗಳ ಹಿಂಡು ಗರಿಗೆದರಿ ದಾರಿಗರೆದುರಿ ।
ಸವಿನೋಟವನು ಬೀರಿ ನರ್ತಿಸುತಿದೆ !
ಕವಿಯೆ ! ನವ್ಮ್ಯೀ ನೃತ್ಯವಾವ ಪೆಣ್ಣಿಗು ಬರದು ।
ಅವಧಾನದಿಂದ ನೀ ಬರೆಯೆನುತಿದೆ !

೧೭

ಒಂದುಕಡೆ ಕಬ್ಬಿಣದ ಬೆಟ್ಟವಿನ್ನೊಂದು ಕಡೆ ।
ಯಂದುದುಕ್ಕಿನ ಬೆಟ್ಟ ಮತ್ತೊಂದೆಡೆ ॥
ಕಂದ ! ನೀ ಕಕ್ಕಿರುವ ಹಾಲು ನೆತ್ತರವಂತೆ !
ಇಂದಹುವೆ ಭೂತಿಕಣಿ ಕಾವಿಕಣಿಯೋ ?

೧೮

ಸ್ವಾಮಿ ! ಷಣ್ಮುಖದೇವ !! ನಿನ್ನ ಮಹಿಮೆಯಗಾಧ ।
ನೇಮನಿತ್ಯಗಳು ಬಹಳಯ್ಯ ! ನಿನಗೆ ॥
ತಾಮಸನು ನಾ ನಿನ್ನ ಮಹಿಮೆಗಳನೆಂತರಿವೆ ।
ಪ್ರೇಮದೊಳು ನೀನೆ ದಿಟವರಿದು ಕಾಯ್ವೈ ॥

೧೯

ಈ ಮಹರಾಜ ಯಶವಂತರಾವ್ ಘೋರ್ಪಡೆಗೆ ।
ನೀ ಮನೆಯ ದೇವರಾಗಿರುವ ಕತದೆ ॥
ಹೇಮರತ್ನಾದಿಭೂಷಿತನಾಗಿ ಮೆರೆಯುತಿಹೆ ।
ಸ್ವಾಮಿ ! ನಿನ್ನಯ ಪೂಜೆ ಸರಿಯಾಗಿದೆ ॥

೨೦

ಯಶವಂತರಾಯರಿಗೆ ಸಕಲಭಾಗ್ಯವ ಕೊಟ್ಟು
ಕುಶಲವಾಗಿರುವಂತೆ ನೋಡುತ್ತಿರು !
ಶಿಶುವೆಂದು ವಾಗೀಶಗುನ್ನತಿಯೊಳುತ್ತರವ ।
ಹಸಿತ ಮುಖದಿಂದಲೇ ನೀಡುತ್ತಿರು !

# ಶ್ರೀ ಮಲ್ಲಿಕಾರ್ಜುನ ಸ್ತುತಿ

## (೧)

ಮಲ್ಲಿಕಾರ್ಜುನಾಯ ನಮೋ ।
ಭ್ರಮರಾಂಬಾಪತಯೆ ನಮೋ || ಪಲ್ಲ ||
ಮಲ್ಲಿಕಾಪ್ರಸೂನ ಪೂಜಿತಾಯ ಶಂಕರಾಯ ನಮೋ || ಅ.ಪ ||

೧

ಗಿರಿವರ ಶ್ರೀಶೈಲವಾಸ,
ಸುರಗಣ ಸಂಸೇವ್ಯ ನಮೋ ||
ದುರಿತನಾಶ ಭಕ್ತಪೋಷ,
ಕರುಣಾಕರ ತೇ ನಮೋ ||

೨

ಶಿಷ್ಟಪಾಲಕಾಯ ನಮೋ ।
ದುಷ್ಟಮರ್ದಕಾಯ ನಮೋ ||
ಕಷ್ಟನಾಶಕಾಯ ಶ್ರಿತಜ ।
ನೇಷ್ಟದಾಯಕಾಯ ನಮೋ ||

೩

ವರಕವಿ ವಾಗೀಶ ವಂದ್ಯ ।
ಚರಣಸರಸಿಜಾಯ ನಮೋ ||
ಶರಣಾಗತ ವರದಾಯಕ ।
ಗುರವೇ ಗಿರಿಶಾಯ ನಮೋ ||

## (೨)

ಸ್ವಾಮಿ ಮಲ್ಲಿಕಾರ್ಜುನಾ । ಸ್ವಾಮಿ ಮಲ್ಲಿಕಾರ್ಜುನಾ || ಪಲ್ಲ ||

೧

ಶ್ರೀಶೈಲವಾಸಿ, ಶ್ರಿತಜನಪೋಷಿ ।
ಶ್ರೀಕಾಂತವಂದ್ಯ ಪದಕಮಲ ||

೨

ಪಂಡಿತಾರ್ಯ ತಾತ,

ಖಂಡಿತಾಘವ್ರಾತ ।

ಚಂಡಭಾನುಪೀಠ ಸ್ಥಾಪನಾದಿ ನಾಥಾ ॥

೩

ಮತಿಹೀನನಾಗಿ, ಗತಿಗಾಣದೀಗ ।

ಪಿತನೆಂದು ಬಂದೆ, ಹಿತದಿಂದೆ ಕಾಯೊ ॥

(೩)

ನಿನ್ನ ನೋಟವೆ ಕಾಮಧೇನುವು ।

ಗುರುವರಾ ॥ ನಿನ್ನ ನೋಟವೆ ಕಾಮಧೇನುವು ॥ ಅ.ಪ ॥

೧

ನಿನ್ನ ನೋಟವೆ ಕಾಮಧೇನುವು ।

ನಿನ್ನ ನೋಟವೆ ಕಲ್ಪವೃಕ್ಷವು ॥

ನಿನ್ನ ನೋಟವೆ ಚಿಂತಾಮಣಿಯು ।

ನಿನ್ನ ಬಿಟ್ಟೆನ್ನಾರ ಕಾಣೆನು ॥

೨

ಮತಿಯು ನೀನೆ ಗತಿಯು ನೀನೆ ।

ಹಿತದ ಬಂಧು ಭಾಗ್ಯ ನೀನೆ ॥

ಸತತ ಪ್ರೇಮದಿಂದ ಕಾಯೊ ।

ಪಿತನು ನೀನೆ ಮಾತೆ ನೀನೆ ॥

೩

ಹರನು ನೀನೆ ಚರನು ನೀನೆ ।

ದುರಿತನಾಶಕರನು ನೀನೆ ॥

ಸುರವರನುತ ಭಕ್ತಿಪ್ರೀತ ।

ವರದ ಗಿರಿಮಲ್ಲೇಶ ನೀನೆ ॥

(೪)

ಕಾಪಾಡು ! ಕಾಪಾಡು ! ಕಾಪಾಡು ! ಮಲ್ಲೇಶ ।
ಪಾಪಪೂರಿತ ಭವದಿ ಬೆಂದು ಬೆಂಡಾದೆ ॥ ಪಲ್ಲ ॥
ಪರನಿಂದೆಯನು ಕೇಳಿ ಪಾಪಿಯಾಯಿತು ಕಿವಿಯು ।
ಪರಸಿರಿಯ ಬಯಸಿ ಮನ ಪಾಪಿಯಾಯ್ತು ॥
ತರವಲ್ಲದುದ ನೋಡಿ ಪಾಪಿಯಾಯಿತು ಕಣ್ಣು ।
ಹರಪೂಜೆ ಮಾಡದಲೆ ಕರ ಪಾಪಿಯಾಯ್ತು ॥ ॥ ೧ ॥
ಶಿವಯಾತ್ರೆ ಮಾಡದಲೆ ಪಾಪಿಯಾಯಿತು ಕಾಲು ।
ಭವಿಕಥೆಯ ಪೇಳಿ ಬಾಯಿಯು ಪಾಪಿಯಾಯ್ತು ॥
ಕುವಿಚಾರವನು ಮಾಡಿ ಪಾಪಿಯಾಯಿತು ಮತಿಯು ।
ಶಿವ ಎನ್ನದೀರಸನೆ ಪಾಪಿಯಾಯ್ತು ॥ ॥ ೨ ॥
ರಾಗದ್ವೇಷದಿ ಮುಳುಗಿ ಪಾಪಿಯಾಯಿತು ತನುವು ।
ಯೋಗವನು ತೊರೆದು ಪ್ರಾಣವು ಪಾಪಿಯಾಯ್ತು ॥
ತ್ಯಾಗ ಗುಣವಿಲ್ಲದಲೆ ಪಾಪಿಯಾಯ್ತಾಚಾರ ।
ವಾಗೀಶ ವರದ ! ಶ್ರೀ ಗಿರಿಮಲ್ಲಿನಾಥಾ ॥ ॥ ೩ ॥

---

## ಮಲ್ಲಿಕಾರ್ಜುನ ಮಂಗಳಾರತಿ

ಆರತಿ ಬೆಳಗುವೆ ದೇವಾ ! ಕರ್ಪುರದಾರತಿ ಕೈಕೊಳು
ದೇವಾ ॥ ಪ ॥
ಮಾರಹರಾ ! ಶಿವ ! ಶ್ರೀಗಿರಿವಾಸ ॥ ಅ. ಪ. ॥
ಘೋರಭವಾರ್ಣವ ತಾರಣ ಕಾರಣ !
ಭೂರಿಮಹಿಮ ! ಭಜಕಾಘ ನಿವಾರಣ ॥ ॥ ೧ ॥
ವ್ಯಾಲಮೂಲ ! ಘನಲೀಲ ಸದಾಮಲ !
ಕಾಲಕಾಲ ! ಶರಣಾಗತಪಾಲಾ ॥ ॥ ೨ ॥
ಸುರಮುನಿ ವಂದಿತ ಚರಣ ಸರೋಜ !
ವರಕವಿ ವಾಗೀಶ್ವರ ಸುರಭೂಜ ॥ ॥ ೩. ॥

---

## ಶಿವಶರಣ

ನಿತ್ಯ ಪೂಜಾಪರನು । ಶರಣ । ನಿತ್ಯಪೂಜಾಪರನು ॥ ಪ ॥
ಪರರ ನಿಂದಿಸನು । ತನ್ನ ಬಣ್ಣಿಸನು ।
ಗುರುವನು ತನು ಮನ ಧನದೆ ಪೂಜಿಪನು ॥ ॥ ೧ ॥
ಕೋಪವ ತಾಳನು । ಪಾಪವ ಮಾಡನು ।
ರೂಪ ಕುರೂಪವನೆಣಿಸನು ತಾನು ॥ ॥ ೨ ॥
ಭೋಗವ ಬಯಸನು । ಯೋಗವ ಬಿಡನು ।
ವಾಗೀಶನ ಮಗನಾಗಿ ಬಾಳುವನು ॥ ॥ ೩ ॥

---

## ಈಶ್ವರೇಚ್ಛೆ

೧

ಆರ ಕೈಯೊಳಗಿಲ್ಲವಾರಕಜ್ಜದೊಳಿಲ್ಲ ।
ಮೀರುವುದು ಈಶ್ವರೇಚ್ಛೆಯನೆಂದಿಗೂ ॥
ವೀರ ಭೂಪಾಲರೂ ಧೀರ ಮುನಿವರ್ಯರೂ ।
ಘೋರ ಕಷ್ಟವನುಂಡುದೀಶ್ವರೇಚ್ಛೆ ॥

೨

ಬಡವ ಬಲ್ಲಿದನಹನು ಬಲ್ಲಿದನು ಬಡವನಹ ।
ಸುಡುಗಾಡು ಅರಮನೆಯ ತಾಣವಹುದು ॥
ಬೆಡಗಿನರಮನೆ ತಾಣ ಸುಡುಗಾಡಿಗಾಗುವುದು ।
ಮಡುವು ನೆಲವಾಗುವುದು ಈಶ್ವರೇಚ್ಛೆ ॥

೩

ಮನುಜನಾವಾಗಲೂ ಉನ್ನತಿಯ ಬಯಸುವನು ।
ಘನ ಕಾರ್ಯವನು ಮಾಡಲಿಚ್ಛಿಸುವನೂ ॥
ಮನದಿಚ್ಛೆ ಪೂರಯಿಸಬೇಕೆಂದು ಬಳಲುವನು ।
ಕೊನೆಗದಕೆ ಫಲವುಪ್ಪುದೀಶ್ವರೇಚ್ಛೆ ॥

೪

ದೇವಾಂಶಸಂಭವರು ಶೂರರಾ ಪಾಂಡವರು ।
ದೇವಾವತಾರಿಯಾ ರಾಮಚಂದ್ರ ॥
ಜೀವ ಪರಮಾತ್ಮ ತತ್ತ್ವಾನುಭವಿಯಾ ಕೃಷ್ಣ ।
ರಾವಪರಿ ಬಳಲಿದರು ಈಶ್ವರೇಚ್ಛೆ ॥

೫

ನರರಿದನು ಅರಿದರಿದು ಮರೆದು ಮರುಳಾಗುವರು ।
ಸುರಮುನಿಗಳಾದಡೂ ಬಳಲುತಿಹರು ॥
ಬರುವ ಸುಖ ದುಃಖವನು ಮಲ್ಲಿಕಾರ್ಜುನನಿತ್ತ ।
ವರವೆಂದು ಸೇವಿಪುದೆ ಈಶ್ವರೇಚ್ಛೆ ॥

---

## ಭಾವದಂತೆ ಫಲ

ಭಾವವೇ ಬ್ರಹ್ಮ ಕಾಣಿರೋ ॥ ಪಲ್ಲ ॥
ಭಾವವಿರದಿರೆ ಜಗವೇ ಶೂನ್ಯ ॥ ಅ. ಪ. ॥

೧

ಭಾವಿಪೊಡೆ ನರರೂಪು ಗುರುವು ತಾನಾಗುವುದು ।
ಭಾವವಿರದಿರೆ ಗುರುವೆ ನರನಾಗಿ ಕಾಂಬುವುದು ॥

೨

ಭಾವಿಪೊಡೆ ಗುರುಪಾದದುದಕ ಪಾವನ ತೀರ್ಥ ।
ಭಾವಮಿಲ್ಲದ ತೀರ್ಥ ಮಡುವಿನಗ್ಗಣಿಯು ॥

೩

ಭಾವಿಪೊಡೆ ಶಿವಲಿಂಗ ಭೂತಿ ರುದ್ರಾಕ್ಷಿಗಳು ।
ಭಾವಮಿರದಿರೆ ಕಲ್ಲು - ಬೂದಿ - ಮರನಹವೊ ॥

೪

ಭಾವಮಿರೆ ಸತಿ - ಪತಿ - ಸಹೋದರ ಸಹೋದರಿಯು ।
ಭಾವಮಿರದಿರೆ ಹೆಣ್ಣು ಗಂಡು ರಕ್ಕಸರೊ ॥

---

# ಗೀತ ವಚನಗಳು

೧

ಆಡುವೆ ಸ್ಮಶಾನದೊಳು । ನೀ ಕೂಡಿರುವೆ ಪಿಶಾಚಗಳೊಳು ।
ಸುಟ್ಟ ಹೆಣದಾ ಬೂದಿ ಮೈಗೆಲ್ಲ ಬಡಿದಿರುವೆ ।
ಉಟ್ಟಿರುವೆ ಶಡೆದಾನೆದೊಗಲ ನೀನು ॥
ರುಂಡಮಾಲೆಯ ಧರಿಸಿಕೊಂಡಮಂಗಲನಾಗಿ ।
ಕಂಡರೂ ನೀನೆ ಮಂಗಲನಾಗಿಹೆ ॥ ಕೆಂಡಗಣ್ಣಿನ
ಗಿರಿಯ ಮಲ್ಲಿಕಾರ್ಜುನದೇವ ! ಕಂಡು ನಿನ್ನಯಪಾದ ಧನ್ಯನಾದೆ ॥

———

ಹರಿವಿಧಿಗಳು ನಿನ್ನ ಪಾದವ ಕಾಣದೆ । ಕೊರಗಿದರಯ್ಯ
ಬಹುದಿನವೂ ॥ ಹರನೆ ! ನಿನ್ನನು ನಾ ಸರಳದೆ ಕಂಡೆನು ।
ಗುರು ಕಾರುಣ್ಯವ ಪಡೆದೆನಾಗಿ ॥ ಪರತರ ಭಕುತಿಯ
ಸಾಧಿಸಿ ಬೆರೆತೆನು ! ಗಿರಿಮಲ್ಲಯ್ಯನ ಶರಣರೊಳು ॥ ೨ ॥

———

ಹರಿಪೂಜಿತನ, ವಿಧಿಪೂಜಿತನ, ಸುರದಾನವ ಮುನಿ
ಪೂಜಿತನ ॥ ಗುರುವರ ಸಿದ್ಧ ಕಿನ್ನರ ಪೂಜಿತನ ।
ಗಿರಿಮಲ್ಲಯ್ಯನ ಕಂಡಮೇಲೆ । ಪರತರ ದೈವವು
ಬೇರಿಹುದೆಂಬುವ ನರಗೆ ನರಕವಾಸವು ತಪ್ಪದಯ್ಯ ॥ ೩ ॥

———

ಹಣವುಳ್ಳವರು ಹಣದೆ ಪೂಜಿಸುವರು ।
ಗುಣವುಳ್ಳವರು ಗುಣದೆ ಪೂಜಿಸುವರು ॥
ಹಣವಿಲ್ಲದ ಗುಣವಿಲ್ಲದ ನಾನು ।
ಅಣುಭಕ್ತಿಯ ಸೇವೆಯ ನಿಡಲು ॥
ಫಣಿಭೂಷಣ ಗಿರಿಮಲ್ಲಯ್ಯನೆ ನೀ ।
ತಣಿದು ತಣಿದು ಕುಣಿದಾಡುವೆಯೆಯ್ಯಾ ॥ ೪ ॥

———

ವಜ್ರ ಕುಸುಮವಾಗುವುದು। ಆ ಬೆಂಕಿ ಮಂಜಾಗುವುದು ॥
ಸಾಗರ ನೆಲವಾಗುವುದು। ಆ ಕಡುವೈರಿಯು ಸಖನಾಗುವನು ॥
ಗರಳವಮೃತವಾಗುವುದು। ಆ ಗಿರಿಮಲ್ಲೇಶನು ಕರುಣಿಸಿದಾಗಲೆ
॥ ೫ ॥

———

ಯೋಗಿಯೆಂಬೆನೆ ನಿನಗೆ ಭೋಗಿಭೂಷಣನಾದೆ।
ವಿಷವ ಕುಡಿದವನೆನ್ನಲಮೃತನಾದೆ॥ ಶಸ್ತ್ರಧರನೆಂಬೆನೇ
ವೃದ್ಧ ತಾಪಸಿಯಾದೆ। ಶಾಂತನೆಂಬೆನೆ ನಿನಗೆ ರುದ್ರನಾದೆ ॥
ಕಾಮಾರಿಯೆಂಬೆನೇ ಪಾರ್ವತೀ ಪತಿಯಾದೆ। ತಿರುಕನೆಂಬೆನೆ
ತ್ರಿಭುವನೇಶನಾದೆ। ಶುದ್ಧ ನೀನೆಂಬೆನೇ ರುಂಡಮಾಲೆಯು
ಧರಿಪೆ। ನಿನ್ನ ರೂಪವದೆಂತೊ ತಿಳಿಯದಾದೆ॥ ಎನ್ನಯ್ಯ
ಶ್ರೀಗಿರಿಯ ಮಲ್ಲಿಕಾರ್ಜುನದೇವ। ಹಗಲು ಕತ್ತಲೆ ಕೂಡಿ
ಕೊಂಡಂತಿದೆ ॥ ಭಕ್ತರಾಗ್ರಹಕಾಗಿ ಲಿಂಗರೂಪವ ತಾಳಿ
ಕಂಗಳಿಗೆ ಕಾಣಲ್ಕೆ ಬಂದಂತಿದೆ ॥ ॥ ೬ ॥

———

ಮೇಲುಮನೆ ನಿನಗೇಕೆ ಸುಡುಗಾಡಿನೊಳಗಿರುವೆ !
ಸ್ನಾನ ನಿನಗೇಕೆ ಜೋಗಿಯು ಪಿಡಿದಿಹೆ॥ ವಸ್ತ್ರ ನಿನಗೇಕೆ
ಬರಿಬತ್ತಲೆಯೆ ತಿರುಗುತಿಹೆ। ಗಂಧ ನಿನಗೇಕೆ
ಬೂದಿಯ ತೊಡೆದಿಹೆ ॥ ಧೂಪ ನಿನಗೇಕೆ ಶವಧೂಮ
ದೊಳಗಿರುತಿರುವೆ। ನೈವೇದ್ಯ ನಿನಗೇಕೆ ವಿಷವ
ಕುಡಿದಿರುವೆ॥ ಇಂತಾಗಿ ನಾ ಕೊಡುವುದೇನಿಹುದೊ
ಮಲ್ಲೇಶ ! ಶಾಂತಪಾವನ ಎನಗೆ ತಿಳಿಯದಿಹುದು ॥
ಕಾಂತುಹರ ! ಗಿರಿಜೇಶ !! ಭಕ್ತಹೃದಯನಿವಾಸ !
ಭಕ್ತಿಯೊಂದನೆ ಗ್ರಹಿಸಿ ಪಾಲಿಸುವುದು ॥ ॥ ೭ ॥

———

# ಜಯವಾಣಿ

ಭಾರತ ಭೂಮಿಗೆ ಜಯವು । ನಮ್ಮ ಭಾಶತ ಭಾಗ್ಯ
ವಿಧಾತಗೆ ಜಯವು ॥ ಪಲ್ಲವಿ ॥

ವೀರ ಸುಭಾಸಗೆ ಜಯವು । ನಮ್ಮ ಧೀರ ಪಟೇಲ
ಗೆ ಜಯವೂ ಜಯವೂ ॥ ಅ.ಪಲ್ಲವಿ ॥

೧

ಗಾಂಧಿ ಮಹಾತ್ಮಗೆ ಜಯವು । ಜಯ ಹಿಂದನಿನಾದದ
ಸೇನೆಗೆ ಜಯವು ॥ ಹಿಂದು ಸೇನಾನಿಗೆ ಜಯವೂ । ನಮ್ಮ
ಹಿಂದೂ ಮಾತೆಗೆ ಜಯವೂ ಜಯವೂ ॥

೨

ಈ ಜಗದೊಡೆಯಗೆ ಜಯವು । ಸುಜನೇಂದ್ರ ಜವಾಹಿರ
ಲಾಲಗೆ ಜಯವು ॥ ರಾಜ ಪ್ರಸಾದಗೆ ಜಯವು । ನಮ್ಮ
ರಾಜ ಗೋಪಾಲಗೆ ಜಯವೂ ಜಯವೂ ॥

೩

ಕನ್ನಡ ದೇಶಕೆ ಜಯವು । ನಮ್ಮ ಕನ್ನಡಕಲಿ
ಜಯಚಾಮಗೆ ಜಯವು ॥ ಕನ್ನಡ ಜಾತಿಗೆ ಜಯವು ।
ನಮ್ಮ ಕನ್ನಡ ಗುರು ವಾಗೀಶಗೆ ಜಯವೂ ॥

———

# ತನುವೆಂಬ ವನವುಂಟು

ತನುವೆಂಬ ವನವುಂಟು । ವನದೊಳು
ಮನೆಯೊಂದು ಬೇರುಂಟು ॥ ಪಲ್ಲ ॥

ಮನವೆಂಬ ಕೋತಿಯು । ವನವನು ಮುರಿಯುತ ।
ಮನೆಯ ಮೇಲಣ ಕುಂಬಿಗೇರಿದುದುಂಟು ॥ ಅ.ಪ ॥

೧

ದಾರಿಯು ಮೂರುಂಟು । ವನದಿ । ಸೋರುವ ಸರವುಂಟು ।
ಏರಿಯನೇರುತ । ಜಾರುತ ನಡೆಯಲು ।
ಮೀರಿದ ಮನೆ । ಮಣಿಪುರದೊಳಗುಂಟು ॥

೨

ಕಿಡಿಕಿಗಳೊಂಬತ್ತು । ಮನೆಗೆ । ಪಡಸಾಲೆಗಿಂಬಿತ್ತು ।
ನಡುವಣ ಕಂಬದ । ಬುಡದಿ ನಾಗರಹಾವು ।
ಹೆಡೆಯನೆತ್ತಿ । ಕಡಿಯಲು ಬಂದಿತ್ತು ॥

೩

ಬಡಿವ ಕೋಣಗಳೆಂಟು। ಆರು । ಕಡಿವ ಸಿಂಹಗಳುಂಟು ।
ಅಡವಿಯ ನಡುವಣ । ಗಡಿಯೊಳು ಸಾಗಿದ ।
ಒಡೆಯನ ಕೊಲ್ಲುವ । ಹವಣದೊಳುಂಟು ॥

೪

ಕೋಗಿಲೆ ಮರಿಯುಂಟು । ಅದರ । ರಾಗವು ಬಹಳುಂಟು ।
ಯೋಗಿಯ ಭೋಗಿಯ । ಮನದ ವಿಕಾರವ ।
ನೀಗುತ ಮೌನದ । ನಿದ್ದೆಯೊಳುಂಟು ॥

೫

ಮೂಡಣದಿಕ್ಕಿನೊಳು । ರವಿಯು । ಮೂಡಲು ಕತ್ತಲೆಯು ।
ಓಡಲು ಚಂದ್ರನ । ತೇಜದಿ ಕೂಡಿದ ।
ನಾಡಿನ ಗುರು । ವಾಗೀಶ ನಿವಾಸದ ॥

---

# ಗುರುವಿನ ಹಿರಿಮೆ

ಹರಮುನಿದರೆ ಗುರುಕಾಯ್ವನಮ್ಮಾ ॥ ಪ ॥

ಗುರು ಮುನಿದರೆ ಹರ ಕಾಯನಮ್ಮಾ ॥ ಅ.ಪ ॥

೧

ಹರನಿಳೆಗೆ ತಾನೇ । ಗುರುವಾಗಿ ಬಂದು ।
ವರಬೋಧೆಯಿಂದ । ಪೊರೆಯುವನು ಜನರ ॥

೨

ಭವಬಂಧನವನು । ಜವದಿಂದ ಬಿಡಿಸಿ ।
ಶಿವಪದವ ಕೊಡುವ । ನಿವನೋರ್ವನಮ್ಮಾ ॥

೩

ಹರಗಿಂತ ಗುರುವೆ । ವರನೆಂದು ವೇದ ।
ಕರೆಯುವುದ ನೋಡಿ । ಮರೆಯದಲೆ ಭಜಿಸು ॥

೪

ಶಿವಯೋಗಿಯಾಗಿ । ಭವದಾಸೆ ನೀಗಿ ।
ಅವನಿಯೊಳು ಚರಿಪ । ಸುವಿಚಾರಿ ಗುರುವು ॥

೫

ಗುರುವರನ ಜರಿಯೆ । ಸರಿಯುವುದು ಸಿರಿಯೆ ।
ಉರಿಯುವುದು ವಂಶ । ಅರಿದರಿದು ನೋಡು ॥

೬

ತನುಮನಗಳಿಂದ । ಧನಧಾನ್ಯಗಳನು ।
ಅನುದಿನವು ನೀಡು । ನಿನಗಿಲ್ಲ ಕೇಡು ॥

೭

ಭಯಭಕ್ತಿಯಿಂದ । ನಿಯಮಂಗಳಿಂದ ।
ನಯನುಡಿಗಳಿಂದ । ಜಯವೆಂದು ಪಾಡು ॥

೮

ಯೋಗಿಗಳಿಗಾಗಿ । ತ್ಯಾಗವನು ಮಾಡು ।
ವಾಗೀಶ ಗುರುವು । ಬೇಗದೊಳು ಪೊರೆವ ॥

ಟೆಲಿಗ್ರಾಂ : ಜವಾಜಿ ಸ್ಥಾಪನೆ 1927 ಟೆಲಿಫೋನ್ { ಫ್ಯಾಕ್ಟರಿ : 3389 ; ಅಂಗಡಿ : 5385 }

ರಿಜಿಸ್ಟರ್ಡ್ 

ಟ್ರೇಡ್ ಮಾರ್ಕು

# ಪೂಜೆಗೆ ಅವಶ್ಯವಾಗುವ ಪರಿಮಳ ವಸ್ತುಗಳು

## ಪರಿಮಳ ದಶಾಂಗ

ಹಾಲುಮಡ್ಡಿ, ಶಿಲಾರಸ, ಸಾಂಬ್ರಾಣಿ, ಶ್ರೀಗಂಧ, ಅಗರು, ಜೇನು ಸುವಾಸನಾಯುಕ್ತ ಹೂಗಳ ಪುಡಿ ಇವುಗಳಿಂದ ತಯಾರಿಸಿದೆ. ಸ್ವಲ್ಪ ಪುಡಿಯನ್ನು ಬೆಂಕಿಯ ಕೆಂಡದ ಮೇಲೆ ಚಿಮುಕಿಸಿದರೆ ಸುವಾಸನೆಯುಳ್ಳ ಹೊಗೆ ಬರುತ್ತದೆ. ಬಾಣಂತಿ ಮತ್ತು ಮಕ್ಕಳಿಗೆ ಸ್ನಾನ ಮಾಡಿಸಿದ ಮೇಲೆ ಹೊಗೆ ಹಾಕುವುದಕ್ಕೆ ಸಾಂಬ್ರಾಣಿಯ ಬದಲು ಇದನ್ನು ಉಪಯೋಗಿಸಬಹುದು.

## ಧೂಪದ ಕೊಡ (ಆರತಿ ಕರ್ಪೂರ)

ಹಸನು ಹಾಲುಮಡ್ಡಿ, ಸಾಂಬ್ರಾಣಿ, ಶ್ರೀಗಂಧ, ಜೇನು ಮತ್ತು ಹೂವಿನ ಪುಡಿ ಇವುಗಳಿಂದ ತಯಾರಿಸಿ ಮೃದುವಾಗುವಂತೆ ತುಪ್ಪದಲ್ಲಿ ಚೆನ್ನಾಗಿ ಕುಟ್ಟಿಸಿರುತ್ತದೆ.

ಇದನ್ನು ಸಣ್ಣನೆ ಬತ್ತಿಮಾಡಿ ಹಚ್ಚಿದರೆ ಉರಿಯುತ್ತದೆ. ಆರತಿ ಮಾಡಬಹುದು. ಆರಿಸಿದರೆ ಗಂಧದ ಕಡ್ಡಿಯಂತೆ ಹೊಗೆ ಬರುತ್ತದೆ. ಧೂಪಕ್ಕೋಸ್ಕರವೂ ಉಪಯೋಗಿಸಬಹುದು.

ಇವಲ್ಲದೆ ಉತ್ಕೃಷ್ಟವಾದ ಹಸಿಗಂಧ (ಅರಗಜ) ಪನ್ನೀರು, ಅಗರುಬತ್ತಿಗಳೂ ಸುಗಂಧ ದ್ರವ್ಯಗಳೂ ಸಹ ನಮ್ಮಲ್ಲಿ ಸುಲಭವಾದ ಬೆಲೆಗೆ ದೊರೆಯುತ್ತವೆ.

**ಎಂ. ಮುದ್ದಣ್ಣ ಅಂಡ್ ಸನ್ಸ್**

**ಸುಗಂಧ ದ್ರವ್ಯ ವ್ಯಾಪಾರಿಗಳು**

೧೫೮, ಅವಿನ್ಯೂ ರಸ್ತೆ, ಬೆಂಗಳೂರು—೨